॥ ಶ್ರೀ: ॥

ಸತೀಹಿತೈಷಿಣೀ' ಸನ್ಮಾನ ಗ್ರಂಥಾವಳಿ ಸಂಖ್ಯೆ ೮

# ಭಾರ್ಗವ ಗರ್ವಭಂಗಂ

—ಎಂಬ—

## ಬಾಲರಾಮ ಚರಿತಂ

(ರೂಪಕ)



“ದಕ್ಷಿಣೇ ಲಕ್ಷ್ಮಣೋ ಯಸ್ಯ ವಾಮೇತು ಜನಕಾತ್ಮಜಾ ।
ಪುರತೋ ಮಾರುತಿರ್ಯಸ್ಯ ತಂ ವಂದೇ ರಘುನಂದನಮ್ ॥



ಪ್ರಥಮ ಮುದ್ರಣ ೧,೦೦೦ ಪ್ರತಿಗಳು



ನಂಜನಗೂಡು
“ಸತೀಹಿತೈಷಿಣೀ” ಮಾತೃಮಂದಿರದಲ್ಲಿ ಪ್ರಕಟಿಸಲ್ಪಟ್ಟುದು
೧೯೨೮

## 'Sathi Hitaishini' Sanmana Granthavali

EDITED & PUBLISHED

BY

SHRIMATI TIRUMALAMBA

AT MATRUMANDIRAM, NANJANGUD



ಈ ಪುಸ್ತಕದ ೫ ರಿಂದ ೧೦೦ ಪುಟಗಳವರೆಗೆ ಮೈಸೂರು ಶ್ರೀ ಕೃಷ್ಣಾ ಪ್ರೆಸ್ಸಿನಲ್ಲಿ ಮುದ್ರಿತವಾಯ್ತು. ಉಳಿದ ಕೆಲವು ಭಾಗ ಮಾತ್ರ ಬೆಂಗಳೂರು ಪ್ರೆಸ್ಸಿನಲ್ಲಿ ಮುದ್ರಿತವಾಯ್ತು.

|| ಶ್ರೀಃ ||

# ಸ ಮ ರ್ಪ ಣೆ

---

“ ಪಾರಾವಾರ ಪಯೋವಿಶೋಷಣಕಲಾ ಪಾರೀಣ ಕಾಲಾನಲ |
ಜ್ವಾಲಾಜಾಲ ವಿಹಾರಹಾರಿ ವಿಶಿಖ ವ್ಯಾಪಾರ ಘೋರಕ್ರಮಃ ||
ಸರ್ವಾವಸ್ಥ ಸಕೃತ್ಪ್ರಪನ್ನ ಜನತಾ ಸಂರಕ್ಷಣೈಕವ್ರತೀ |
ಧರ್ಮೋ ವಿಗ್ರಹವಾನಧರ್ಮ ವಿರತಿಂ ಧನ್ವೀಸತನ್ವೀತು ನಃ || ”



“ ಧ್ಯೇಯಂ ಸದಾ ಪರಿಭವಘ್ನ ಮಭೀಷ್ಟದೋಹಂ |
ತೀರ್ಥಾಸ್ಪದಂ ಶಿವವಿರಿಂಚಿನುತಂ ಶರಣ್ಯಂ ||
ಭೃತ್ಯಾರ್ತಿಹಂ ಪ್ರಣತಪಾಲ ಭವಾಬ್ಧಿಪೋತಂ |
ವಂದೇ ಮಹಾಪುರುಷ ತೇ ಚರಣಾರವಿಂದಮ್ || ”

“ ಯತ್ಪಾದಪಂಕಜರಜಃ ಶ್ರುತಿಭಿರ್ವಿಮೃಗ್ಯಂ |
ಯನ್ನಾಭಿಪಂಕಜಭವಃ ಕಮಲಾಸನಶ್ಚ ||
ಯನ್ನಾಮ ಸಾರ ರಸಿಕೋ ಭಗವಾನ್ ಪುರಾರಿ |
ಸ್ತಂ ರಾಮಚಂದ್ರಮನಿಶಂ ಹೃದಿ ಭಾವಯಾಮಿ || ”

“ ಶ್ರೀ ಪಾದರೇಣು ”

# ಪ್ರಾರ್ಥನೆ

(ರಾಗ: ಮೋಹದ ನಲ್ಲ ಬಾರೋ ಎಂಬಂತೆ)

ಶ್ರೀ ರಘುರಾಮ ಬಾರೈ, ಪದವನ್ನು ತೋರೈ ॥ ಪ ॥

ದಶರಥ ಪ್ರಿಯ ಬಾಲ, ದಶಮುಖಾಸುರ ಕಾಲ।
ಕುಶಿಕಾತ್ಮಜ ಮುಖಪಾಲ ಶಶಾಂಕನಿಭಫಾಲ ॥ ರಾಮ ॥ ॥ ೧ ॥

ಶತಪತ್ರಾಯತನೇತ್ರ, ಶತಪತ್ರಾಪ್ತಜ ಮಿತ್ರ।
ಶತಮನ್ಯು ಸ್ತುತಿಪಾತ್ರ, ಶತಯಾಗಸಹಜಾತ ॥ ರಾಮ ॥ ॥ ೨ ॥

ವರಶೇಷಗಿರಿ ನಿಲಯ, ಶರಣರಕ್ಷಣಸದಯ।
ಗಿರಿಜಾಧವಪ್ರಿಯ, ನುತಸುರ ಸಮುದಾಯ ॥ ಶ್ರೀ ರಘುರಾಮ ಬಾರೈ ॥ ॥ ೩ ॥

# ಬಿನ್ನಹ

'ಭಾರ್ಗವ ಗರ್ವಭಂಗ'ವೆಂಬ ಅಭಿಧಾನದ ಬಾಲರಾಮ ಚರಿತವಾದ ಈ ದೃಶ್ಯ ಪ್ರಬಂಧವು ನಾಲ್ಕು ವರ್ಷಗಳ ಹಿಂದೆಯೇ ಪ್ರಕಟವಾಗಬೇಕಾಗಿದ್ದಿತು. ಭಗವಂತನ ಸಂಕಲ್ಪದಲ್ಲಿ ಹಾಗಿರದೆ ಈಗ ಬಂದುದರಿಂದ ಇಂದಿಗಾದರೂ ಪ್ರಕಟವಾಗುವಂತಾಯಿತೆಂದು ಸಮಾಧಾನಪಡಬೇಕಾಗಿದೆ. ಇಷ್ಟು ಕಾಲಾನಂತರದ ಬಳಿಕ ಪ್ರಕಟ ಗೊಂಡಿರುವದಾದರೂ ಕವಿತಾ ಭಾಗವನ್ನು ಬಿಟ್ಟು ಇದೊಂದೇ ಪ್ರಕಟವಾಗಿದೆ. ಹಲವು ಅಡಚಣೆಗಳಿಂದ ಕವಿತಾ ಭಾಗವನ್ನು ಈಗ ಮುದ್ರಿಸಲು ಅವಕಾಶವಾಗದೆ ಇರುವದರಿಂದ ಒಂದೆರಡು ತಿಂಗಳೊಳ ಗಾಗಿ ವಾಚಕರ ಕೈಸೇರುವಂತೆ ಮಾಡುವೆವೆಂದು ನಿವೇದಿಸುವೆವು.

ಪ್ರಸ್ತುತದ ಗ್ರಂಥಕ್ಕೆ ಕೊಟ್ಟಿರುವ ಅಭಿಧಾನದ ವಿಷಯ ವಾಗಿ ನಾಟಕಲಕ್ಷಣ ಸಂಬಂಧವಾದ ಆಕ್ಷೇಪವಾಗಲೀ ತತ್ವ ಸಂಬಂಧವಾದ ಆಕ್ಷೇಪವಾಗಲೀ ತೋರಿದರೂ ಇದು ಅಕ್ಷರಸ್ಥ ಳಲ್ಲದ ಅಬಲೆಯು ಕೃತಿಯೆಂದೂ ಅಬಲೆಯು ಅಲ್ಪಮತಿಗೆ ಒಳಪಡು ವಷ್ಟು ವಿಚಾರಗಳು ಇದರಲ್ಲಿ ಬಂದಿರಬಹುದೆಂದು ಗುಣಗ್ರಾಹಿಗಳು ಭಾವಿಸಬಹುದೆಂದೂ ಹಾಗೂ ತೋರಬರುವ ದೋಷ ಲೋಪಗಳನ್ನು ಲಿಖಿತ ಮೂಲಕ ತಿಳಿಸಿ ಮುಂದಿನ ಮುದ್ರಣದಲ್ಲಿ ಸವರಿಸುವಂತೆ ಸಹಕರಿಸುವುದು ನಮ್ಮ ಧರ್ಮ ಭ್ರಾತೃಗಳನ್ನು ಹೊಂದಿದ ಭಾರ ವೆಂದೂ ನಿವೇದಿಸುತ್ತಿರುವೆವು.

ಭಗವಂತನ ಸಚ್ಚಾರಿತ್ರ್ಯ ಕಥನದಿಂದುಂಟಾಗುವ ಭಾವನಾ ವೇಗದಿಂದ ಪರವಶಳಾಗಿ ಭಾಮೆಯೋರ್ವಳು ತನ್ನ ಬಾಲ್ಯದಲ್ಲಿಯೇ ರಚಿಸಿದ ಈ ಬಾಲರಾಮ ಚರಿತವನ್ನು ಪಂಡಿತರೂ ಪರಮಾರ್ಥ ತತ್ವ ಜ್ಞರೂ ಆದ ಪೂಜ್ಯರ ಸಮ್ಮುಖದಲ್ಲಿ ಕಾಣಿಕೆಯಾಗಿ ಒಪ್ಪಿಸಿ ಅವರ ಹಿತೋಪದೇಶವನ್ನು ಪಡೆಯಬೇಕೆಂಬ ಆಶೆಯು ಸಫಲವಾಗುವದೆ? ಎಂಬುದೇ ನಿರೀಕ್ಷೆಯಾಗಿದೆ.

ಇತಿ, **'ಹಿತೈಷಿಣೀ'**

**ವಿ. ಸೂ.**—'ಸ್ಯಮಂತಕೋಪಖ್ಯಾನ' (ಏಳು ಅಂಕಗಳ ನಾಟಕ)ವು ಮಾರ್ಚ ತಿಂಗಳಲ್ಲಿಯೂ, 'ಆನಂದಮಯಿ' ಜೂಲೈ ತಿಂಗಳಲ್ಲಿಯೂ ಪ್ರಕಟವಾಗುವುದೆಂದು ನಿವೇದಿಸಲು ಸಂತೋಷವಾಗುವುದು. 'ಚಂದ್ರವದನಾ' ದ್ವಿತೀಯ ಮುದ್ರಣವಾಗಿ ಏಪ್ರಿಲ್ ತಿಂಗಳಲ್ಲಿ ಸಿದ್ಧವಾಗುವುದು. 'ಸುಶೀಲೆ'ಯು ನಾಲ್ಕನೆ ಮುದ್ರಣವಾಗುತ್ತಿರುವುದು.

## ಸತೀಹಿತೈಷಿಣೀ, ನಂದಿನಿಯರಿಗೆ
### ಅಭಿಪ್ರಾಯ

---

(ದಿವಂಗತ) **ಜೆ. ಎಸ್. ಚಕ್ರವರ್ತಿ** ಎಂ.ಎ., ಎಫ್.ಆರ್.ಎ.ಎಸ್.

ಬೆಂಗಳೂರು,
8-11-1916

**ಸತೀಹಿತೈಷಿಣೀ ಸಂಪಾದಯಿತ್ರಿಯವರಾದ ತಿರುಮಲಮ್ಮನವರ ಸಮುಕ್ಷಮಕ್ಕೆ.**

ನೀವು ಅಂತಃಕರಣಪೂರ್ವಕವಾಗಿ ಏಪ್ರಿಲ್ ತಿಂಗಳಲ್ಲಿ ಕಳುಹಿಸಿಕೊಟ್ಟ 'ಮಾತೃನಂದಿನಿ', 'ರಮಾನಂದ' ಎಂಬ ಪುಸ್ತಕಗಳೂ ಮತ್ತು ಕಳೆದ ತಿಂಗಳು ೧೭ ನೇ ತಾರೀಖಿನಲ್ಲಿ ರವಾನಿಸಿದ 'ವಿಕ್ರಮ', 'ಚಂದ್ರವದನೆ' ಮುಂತಾದ ಪುಸ್ತಕಗಳೂ ಸುರಕ್ಷಿತವಾಗಿಯೂ ಸಕಾಲದಲ್ಲಿಯೂ ತಲುಪಿದುವು.

'ಮಾತೃನಂದಿನಿ', 'ರಮಾನಂದ' ಎಂಬ ಪುಸ್ತಕಗಳನ್ನು ಸ್ವಾರಸ್ಯದಿಂದ ಓದಿದೆನು. ಅವುಗಳಲ್ಲಿ ನಿದರ್ಶಿಸಲ್ಪಟ್ಟಿರುವ ಸಾರ್ವಜನಿಕವೂ ಪ್ರತಿದಿನೋಪಯುಕ್ತವೂ ಆದ ಸದಾಚರಣಗಳ ಸವಿಸ್ತರಣೆಯು ಬಹಳ ಮನೋಹರವಾಗಿದೆ. ಈಗ ಬಂದಿರುವ ಪುಸ್ತಕಗಳನ್ನೂ ಕೈಲಾದಮಟ್ಟಿಗೆ ಜಾಗ್ರತೆಯಲ್ಲಿಯೇ ಓದಿ ಪುನಃ ನಿಮಗೆ ಬರೆಯುತ್ತೇನೆ.

ಈಗತಾನೇ ಜನ್ಮವೆತ್ತಿರುವ 'ಕರ್ಣಾಟಕ ನಂದಿನಿ' (ಮಾಸಪತ್ರಿಕೆ)ಯು ಕನ್ನಡಿಗರೆಲ್ಲರಿಂದಲೂ ಯಥೋಚಿತವಾಗಿ ಪುರಸ್ಕರಿಸಲ್ಪಟ್ಟು ಮಾತೃಭಾಷೆಯ ಉಪಚಯಕ್ಕೆ ಕಾರಣವಾಗುವುದೆಂದು ಕೋರುತ್ತೇನೆ.

ಇತಿ,

**ಜೆ. ಎಸ್. ಚಕ್ರವರ್ತಿ.**

# ಶೋಧನ ಪತ್ರಿಕೆ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೮ | ೧೦ | ಮಾನುಷ ವೇಶಕ್ಕೆ | ಮಾನುಷ ವೇಷಕ್ಕೆ |
| ೯ | ೧೪ | ಅಪ್ರಮೇಮನೂ | ಅಪ್ರಮೇಯನೂ |
| ೧೧ | ೧೪ | ದಿಂವ | ದಿಂದ |
| ೧೨ | ೧೪ | ಆಕ್ಷೋಹಿಣೀ | ಅಕ್ಷೋಹಿಣೀ |
| ೨೧ | ೨೨ | ದೀನನಾಥನು | ದಿನನಾಥನು |
| ೨೩ | ೨ | ಪಾನಂದವು ! | ವಾನಂದವು ! |
| ೨೪ | ೨೨ | ಎಳಿದು | ಎಳೆದು |
| ೩೦ | ೩ | ತಾಟಕಿ :— | ವಿಶ್ವಾಮಿತ್ರ :— |
| ,, | ೧೦ | ರಾಕ್ಷಸಳಾ | ರಾಕ್ಷಸಿಯಾ |
| ೩೨ | ೨೩ | ನೋಡವ | ನೋಡುವ |
| ೩೯ | ೨ | ಸಾನುಜ | ಸಾನುಜ |
| ೫೨ | ೮ | ವೇದಿ | ವೇದಿಕೆ |
| ೫೯ | ೧೯ | ವೀರ | ವೀರ್ಯ |
| ೬೬ | ೨೦ | ನಂದನೆನ್ನಿಸಿ | ನಂದನನೆನ್ನಿಸಿ |
| ೬೭ | ೬ | ತಡೆಯೇನು ! | ತಡೆಯೇನು ? |
| ,, | ೧೨ | ತನಾಗಿ | ಸುಪ್ರೀತನಾಗಿ |
| ,, | ೧೬ | ಮಹಾತ್ಮನ ! | ಮಹಾತ್ಮನೆ ! |
| ೬೮ | ೨೨ ನೇ ಪಂಕ್ತಿಯಿಂದ ಮುಂದೆ ಈ ವಾಕ್ಯಗಳನ್ನು ಸೇರಿಸಬೇಕು. | | |
| ,, | ೨೩—೨೪ | ರಾಮ, ಲಕ್ಷ್ಮಣ :—ಪೂಜ್ಯರ ಅಭಿಮತದಂತೆಯೇ ನಡೆವೆವು. | |
| ,, | ೨೫—೨೬ | ವಿಶ್ವಾ:—ಅಸ್ತು! ನಾವೂ ಮಿಥಿಲಾನಗರಿಗೆ ಹೊರಡುವೆವು ; ನೀವೂ ತಪಸ್ಸಿಗೆ ತೆರಳಬಹುದು. (ಎಲ್ಲರೂ ಹೊರಡುವರು.) | |
| ೭೨ | ೨೧ | ಕುತುಹಲಾ | ಕುತೂಹಲಾ |
| ೭೬ | ೧ | ಮಾಡಿದನು | ಮಾಡಿದರು |
| ,, | ೮ | ಮ್ಲೀಂಭ | ಮ್ಲೀಂಛ |
| ೭೭ | ೨೦—೨೧ | ಮಾನನಾಗಿ ಔತನವನ್ನು | ಮಲಿನನಾಗಿ ಬಂದಿದ್ದಾತನನ್ನು |
| ೭೯ | ೧ | ಸಾದುದಲ್ಲದೆ | ನಾದಲ್ಲದೆ |
| ,, | ೧೩ | ಉದ್ದೆಶವೂ | ಉದ್ದೇಶವೂ |
| ,, | ೧೪ | ಪಕೃತ | ಪ್ರಕೃತ |

॥ ಶ್ರೀಃ ॥

ಕಥಾ ಸಾರಾಂಶ

# (ಭಾರ್ಗವ ಗರ್ವಭಂಗ)

ಸೂತ್ರಧಾರನ ಪ್ರಸ್ತಾವನೆ. ೧-೮.

ಅಂಕ ೧. ಪುಟಗಳು ೮-೨೩.

ಅಯೋಧ್ಯಾನಗರದ ರಾಜವೀಧಿಯಲ್ಲಿ ವಿಶ್ವಾಮಿತ್ರನ ಪ್ರವೇಶ; ವಿಶ್ವಾಮಿತ್ರನು ಮಾಡುವ ಭಗವದ್ಗುಣಕಥನ, ದಶರಥ-ಜನಕರ ಭಾಗ್ಯವನ್ನು ಕುರಿತು, ಅಭಿನಂದನ; ಬಳಿಕ, ರಾಜಕಂಚುಕಿಯೊಡನೆ ಹೊರಡುವುದು. ದಶರಥ ಮಹಾರಾಯನು ಆಸ್ಥಾನದಲ್ಲಿ ವಸಿಷ್ಠ-ವಾಮದೇವಾದಿಗಳೊಡನೆ ರಾಮಾದಿ ಕುಮಾರರ ವಿವಾಹವನ್ನು ಮಾಡಬೇಕೆಂದಾಲೋಚಿಸುವುದು. ವಿಶ್ವಾಮಿತ್ರನ ಆಗಮನ, ದಶರಥನು ಪುರೋಹಿತಾಮಾತ್ಯರೊಡನೆ ಇದಿರ್ಗೊಂಡು ಸತ್ಕರಿಸುವುದು. ವಿಶ್ವಾಮಿತ್ರನು ದಶರಥರಾಯನಿಂದ ವಾಗ್ದಾನವನ್ನು ಪಡೆದು, ರಾಮನನ್ನು ಕಳುಹಲು ಕೇಳುವುದು-ದಶರಥನ ಚಿಂತೆ, ಶೋಕ, ದೈನ್ಯಪ್ರಾರ್ಥನೆ; ವಿಶ್ವಾಮಿತ್ರನ ಆಗ್ರಹ, ವಸಿಷ್ಠನು ಮಾಡುವ ಸಮಾಧಾನ, ದಶರಥನು ರಾಮಲಕ್ಷ್ಮಣರನ್ನು ಕರೆಯಿಸಿ ವಿಶ್ವಾಮಿತ್ರನಿಗೊಪ್ಪಿಸುವುದು. ವಿಶ್ವಾಮಿತ್ರನು ರಾಮಲಕ್ಷ್ಮಣರೊಡನೆ ಹೊರಡುವುದು.

ಅಂಕ ೨-ಪುಟಗಳು ೨೪-೪೧.

ಕಾನನಪ್ರಾಂತದಲ್ಲಿ ತಾಟಕಿಯ ಪ್ರವೇಶ. ತಾಟಕಿ, ಮಾರೀಚ ಸುಬಾಹುಗಳೊಡನೆ ಆಲೋಚಿಸುವಿಕೆ; ಯಜ್ಞಧ್ವಂಸಕ್ಕಾಗಿ ಮಾರೀಚ ಸುಬಾಹುಗಳು ವಿಶ್ವಾಮಿತ್ರನ ಆಶ್ರಮದ ಕಡೆಗೆ ತೆರಳುವುದು. ತಾಟಕಿ ರಾಮಲಕ್ಷ್ಮಣರೊಡನೆ ಬರುವ ವಿಶ್ವಾಮಿತ್ರರನ್ನು ಇದಿರಿಸಲು ಹೋಗುವುದು.

ರಾಮಲಕ್ಷ್ಮಣರೊಡಗೂಡಿದ ವಿಶ್ವಾಮಿತ್ರನು ಸರಯೂ ತೀರದ ಆಶ್ರಮ ಪ್ರಾಂತದಲ್ಲಿ ಪ್ರವೇಶಿಸುವುದು. ಋಷಿಪುತ್ರರು ಬಂದು ನದಿಯನ್ನು ದಾಟಲು ದೋಣಿ ಸಿದ್ಧವಾಗಿರುವುದೆಂದು ನಿವೇದಿಸುವುದು. ರಾಮಲಕ್ಷ್ಮಣರೊಡನೆ ವಿಶ್ವಾಮಿತ್ರನು ಸರಿಯಾಗಿ ತೀರಕ್ಕೆ ಬಂದು ದೋಣಿಯನ್ನೇರಿ ಋಷಿಗಳನ್ನು ಬೀಳ್ಕೊಟ್ಟು ದೋಣಿಯನ್ನು ಮುಂದರಿಸುವುದು.

ಗಂಗಾವರ್ಣನೆ ; ಮೂವರೂ ಗಂಗಾತೀರವನ್ನು ಸೇರಿ, ಕೆಳಗಿಳಿದು ಅಂಬಿಗನಿಗೆ ಅಪ್ಪಣೆಕೊಟ್ಟು ಕಳುಹುವುದು. ವಿಶ್ವಾಮಿತ್ರನ ಅನುಮತಿಯಂತೆ ರಾಮಲಕ್ಷ್ಮಣರು ಗಂಗಾಯಮುನೆಯರನ್ನು ಸ್ತುತಿಸಿ, ವಂದಿಸಿ, ಸೂರ್ಯನನ್ನು ಸೇವಿಸುವುದು. ಬಳಿಕ ವನಾಂತರವನ್ನು ಪ್ರವೇಶಿಸುವುದು. ರಾಮಲಕ್ಷ್ಮಣರಿಗೆ ವಿಶ್ವಾಮಿತ್ರನು ಹೇಳುವ ತಾಟಕಾವೃತ್ತಾಂತ ಸೌಮ್ಯರೂಪದಲ್ಲಿ ತಾಟಕಿಯು ಪ್ರವೇಶಿಸಿ ತಾನು ಋಷಿಪತ್ನಿಯೆಂದು ಅಪಲಪಿಸುವುದು; ಮತ್ತು ರಾಮಲಕ್ಷ್ಮಣರ ವೃತ್ತಾಂತವನ್ನು ತಿಳಿದು ರಾಮನನ್ನು ತನ್ನೊಡನೆ ಬರಲು ಬಲಾತ್ಕರಿಸುವುದು. ತಾಟಕಿಯು ದಾಷ್ಟ್ರ್ಯಕ್ಕಾಗಿ ವಿಶ್ವಾಮಿತ್ರನು ಆಗ್ರಹಗೊಳ್ಳುವುದು; ತಾಟಕಿ ಮಾಯವಾಗಿ ಶಿಲಾವರ್ಷವನ್ನು ಸುರಿಸಿ ಅರ್ಭಟಿಸುವುದು. ವಿಶ್ವಾಮಿತ್ರನು ತಾಟಕಿಯನ್ನು ವಧಿಸಲು ರಾಮನಿಗೆ ಆಜ್ಞಾಪಿಸುವುದು. ಲಕ್ಷ್ಮಣನು ರಾಮನ ಇಷ್ಟದಂತೆ ಬಾಣಪ್ರಯೋಗಮಾಡಿ ತಾಟಕಿಯ ಕಿವಿಮೂಗುಗಳನ್ನು ಛೇದಿಸುವುದು. ತಾಟಕಿಯ ವೀರಾವೇಶ ; ವಿಶ್ವಾಮಿತ್ರನು ರಾಮನಿಗೆ ತ್ವರೆಪಡಿಸುವುದು. ರಾಮನು ತಾಟಕಿಯನ್ನು ನಿಗ್ರಹಿಸುವುದು. ದೇವದುಂದುಭಿಸಹಿತ ಪುಷ್ಪವೃಷ್ಟಿಯಾಗಿ ತಾಟಕಾವಧದಿಂದ ಸಂತುಷ್ಟರಾದ ದೇವತೆಗಳೊಡನೆ ಇಂದ್ರನು ಬಂದು ಸಾನುಜನಾದ ರಾಮನನ್ನು ಸ್ತುತಿಸಿ, ವಿಶ್ವಾಮಿತ್ರನನ್ನು ಅಭಿನಂದಿಸಿ, ರಾಮಲಕ್ಷ್ಮಣರಿಗೆ ಸಕಲ ಶಸ್ತ್ರಾಸ್ತ್ರಗಳನ್ನು ಉಪದೇಶಿಸಲು ಪ್ರಾರ್ಥಿಸಿ ಅದೃಶ್ಯನಾಗುವುದು. ವಿಶ್ವಾಮಿತ್ರನು ರಾಮಲಕ್ಷ್ಮಣರನ್ನೊಡಗೊಂಡು ಆಶ್ರಮಕ್ಕೆ ತೆರಳುವುದು.

ಅಂಕ ೩. ಪುಟಗಳು ४೦-೫೪.

ಸಿದ್ಧಾಶ್ರಮ ಪ್ರಾಂತದಲಿ, ಸಿದ್ಧಚಾರಣರ ಪ್ರವೇಶ, ಸಿದ್ಧಚಾರಣರು ಮಾಡುವ ವಿಶ್ವಾಮಿತ್ರನ ತಪಃಪ್ರಭಾವ ವರ್ಣನೆ, ರಾಮಲಕ್ಷ್ಮಣರ ಶ್ಲಾಘನೆ, ವಿಶ್ವಾಮಿತ್ರನಿಂದ ರಾಮನು ಸಮಸ್ತ ಶಸ್ತ್ರಾಸ್ತ್ರಗಳ ಪ್ರಯೋಗೋಪಸಂಹಾರಾದಿ

ಮಂತ್ರ ರಹಸ್ಯಗಳನ್ನು ಪಡೆದುದರ ವರ್ಣನೆ. ರಾಮನಿಗೆ ಶಸ್ತ್ರಾಸ್ತ್ರಾಭಿಮಾನಿ ದೇವತೆಗಳು ಬಂದು ವಿಧೇಯರಾದುದು ಮತ್ತು ರಾಮನು ಅವರಿಗೆ ಸ್ವೇಚ್ಛೆಯಲ್ಲಿದ್ದು ಸ್ಮರಿಸಿದಾಗ ಬರಲು ಆಜ್ಞೆಯಿತ್ತು, ತಾನು ಪಡೆದ ಶಸ್ತ್ರಾಸ್ತ್ರಗಳನ್ನು ಲಕ್ಷ್ಮಣನಿಗೂ ಉಪದೇಶಿಸುವುದು-ಅದರ ವಿವರಣೆ. ಮಾರೀಚನು ವ್ಯಸ್ತನಾಗಿ ಪ್ರವೇಶಿಸುವುದು ; ದುಶ್ಶಕುನ, ಹೃತ್ತಾಪಗಳಿಂದ ಕಳವಳಿಸುವುದು, ಸುಬಾಹುವು ಮುಖದಿಂದ ತಾಟಕಾವಧ ವೃತ್ತಾಂತವನ್ನರಿತು ಪ್ರಲಾಪಿಸುವುದು, ಸುಬಾಹುವು ಹೃತ್ತಾಪವನ್ನು ದ್ವೇಷಸಾಧನೆಯಿಂದ ನಿವಾರಿಸೆಂದು ಬೋಧಿಸುವುದು. ಮಾರೀಚನು ಆಗ್ರಹದಿಂದ ತನ್ನ ತಾಯಿಯನ್ನು ಕೊಂದ ರಾಮಲಕ್ಷ್ಮಣರನ್ನೂ, ವಿಶ್ವಾಮಿತ್ರನನ್ನೂ, ನಿಗ್ರಹಿಸುವೆನೆಂದು ವಿಜೃಂಭಿಸಿ ಯಾಗಶಾಲೆಯ ಕಡೆಗೆ ತೆರಳುವುದು.

ವಿಶ್ವಾಮಿತ್ರನ ಆಶ್ರಮದಲ್ಲಿ ಶಿಷ್ಯರ ಪ್ರವೇಶ ; ವಿಶ್ವಾಮಿತ್ರನ ಮೌನ ವ್ರತದ ವಿಚಾರ, ರಾಮಲಕ್ಷ್ಮಣರ ಶೌರ್ಯ-ಪ್ರತಾಪಾದಿವರ್ಣನೆ ; ರಾಕ್ಷಸಂ ಆಗಮನ ಸೂಚಕಗಳಾದ ಅಪಶಕುನಗಳಿಂದ ಯಜ್ಞಶಾಲೆಯಲ್ಲಿ ಋಷಿಗಳ ಕಳವಳ; ಸಸೈನ್ಯರಾದ ಮಾರೀಚ-ಸುಬಾಹುಗಳ ಆರ್ಭಟ, ಅಟ್ಟಹಾಸ; ಋಷಿ-ಋಷಿಪುತ್ರರ ಹಾಹಾಕಾರ, ರಾಮನ ಅಭಯವಚನ ; ಸಾನುಜನಾದ ರಾಮನು ಸಸೈನ್ಯನಾದ ಸುಬಾಹುವನ್ನು ನಿಗ್ರಹಿಸಿ ಮಾರೀಚನನ್ನು ಬಾಣದಿಂದ ದೂರಕ್ಕೋಡಿಸುವುದು. ದೇವದುಂದುಭಿಗಳೊಡನೆ ಪುಷ್ಪವೃಷ್ಟಿಯಾಗಿ ದೇವತೆಗಳೊಡನೆ ದೇವೇಂದ್ರನು ಪ್ರತ್ಯಕ್ಷನಾಗಿ ರಾಮಲಕ್ಷ್ಮಣರನ್ನು ಸ್ತುತಿಸಿ, ವಿಶ್ವಾಮಿತ್ರನನ್ನು ಶ್ಲಾಘಿಸಿ-ಅದೃಶ್ಯನಾಗುವುದು. ರಾಮಲಕ್ಷ್ಮಣರು ವಿಶ್ವಾಮಿತ್ರನ ಬಳಿಗೆ ಬಂದು ನಮಸ್ಕರಿಸುವುದು ವಿಶ್ವಾಮಿತ್ರನು ಆನಂದದಿಂದ ರಾಮಲಕ್ಷ್ಮಣರನ್ನು ಆಶೀರ್ವದಿಸಿ ಆದರಿಸುವುದು, ಋಷಿಗಳೆಲ್ಲರೂ ಜನಕಮಹಾರಾಯನಲ್ಲಿರುವ ಮಹಾಧನುಸ್ಸನ್ನು ಪರೀಕ್ಷಿಸಲಿಕ್ಕೂ, ಅವನು ಮಾಡುವ ಯಜ್ಞವನ್ನು ನೋಡಲಿಕ್ಕೂ ರಾಮಲಕ್ಷ್ಮಣರನ್ನು ಕರೆದುಕೊಂಡು ಬರುವಂತೆ ಪ್ರಾರ್ಥಿಸುವುದು. ವಿಶ್ವಾಮಿತ್ರನು ಸಮ್ಮತಿಸುವುದು.

ಅಂಕ ೮. ೧೪-೭೮.

ಸಾಗರತೀರಪ್ರಾಂತದಲ್ಲಿ ಸಿದ್ಧಚಾರಣರ ಪ್ರವೇಶ :—

ರಾಮಲಕ್ಷ್ಮಣರ ಅದ್ಭುತ, ಅದ್ವಿತೀಯ, ಅಮಾನುಷ ಶೌರ್ಯಸಾಹಸಾದಿ ಗುಣಗಳ ವರ್ಣನೆ. ಮಾರೀಚನ ಅವಸ್ಥಾನಿರೂಪಣ, ಬಾಣಹತಿಯಿಂದ ನೊಂದು

ಬಂದು ದಂಡುಗೊಂಡ ಮಾರೀಚನ ಪ್ರವೇಶ, ಮಾರೀಚನ ಶೋಕ, ರಾಮನ ಪ್ರತಾಪವರ್ಣನ ಶ್ರವಣದಿಂದ ಭಯಕಂಪಿತನಾಗಿ ತಪಸ್ಸಿಗಾಗಿ ತೆರಳುವುದು. ಸಿದ್ಧ ಚಾರಣರು ಮಾರೀಚನಿಗಾದ ಅವಸ್ಥೆಗಾಗಿ ನಕ್ಕು ರಾಮಲಕ್ಷ್ಮಣರನ್ನು ನೋಡಲು ಹೊರಡುವುದು. ವಿಶಾಲನಗರದ ಬಳಿ ಬ್ರಾಹ್ಮಣರ ಪ್ರವೇಶ, ವಿಶ್ವಾಮಿತ್ರನ ಯಜ್ಞಸಮಾರಂಭವರ್ಣನ, ರಾಮಲಕ್ಷ್ಮಣರ ಗುಣಕಥನ, ಋಷಿಗಳು ಬಂದು ಜನಕರಾಯನು ಯಜ್ಞವನ್ನಾಚರಿಸುವದನ್ನು ಹೇಳಲು ಬ್ರಾಹ್ಮಣರು ತ್ವರೆಗೊಂಡು ತೆರಳುವುದು. ಸುಮತೀಮಹಾರಾಯನ ಕಂಚುಕಿಯು ಮುಖದಿಂದ ರಾಮಾದಿಗಳ ಆಗಮನ ವೃತ್ತಾಂತವನ್ನರಿತು ಋಷಿಗಳು ಮುಂದಾಗುವುದು. ವಿಶಾಲನಗರೋದ್ಯಾನದ ಮುಂದೆ ಸಪರಿವಾರನಾದ ಸುಮತಿರಾಯನೊಡನೆ ರಾಮಲಕ್ಷ್ಮಣಸಹಿತನಾದ ವಿಶ್ವಾಮಿತ್ರನು ಪ್ರವೇಶಿಸುವುದು. ಸುಮತಿರಾಯನ ಆದರಾತಿಥ್ಯಕ್ಕಾಗಿ ವಿಶ್ವಾಮಿತ್ರನು ತೃಪ್ತನಾಗಿ ಅವನಿಂದ ಬೀಳ್ಕೊಳ್ಳುವುದು. ರಾಯನು ರಾಮಲಕ್ಷ್ಮಣರನ್ನು ಶ್ಲಾಘಿಸಿ ಬೀಳ್ಕೊಟ್ಟು ಹಿಂತಿರುಗುವುದು. ವಿಶ್ವಾಮಿತ್ರನು ರಾಮಲಕ್ಷ್ಮಣರೊಡನೆ ಮುಂದೆ ಹೊರಡುವುದು. ಮಿಥಿಲಾನಗರದಲ್ಲಿ ಗೌತಮಾಶ್ರಮ ಪ್ರವೇಶ, ಆಶ್ರಮವರ್ಣನ, ವಿಶ್ವಾಮಿತ್ರನ ಮುಖದಿಂದ ಅಹಲ್ಯಾವೃತ್ತಾಂತ ನಿರೂಪಣ; ಅಹಲ್ಯೋದ್ಧಾರಕ್ಕಾಗಿ ವಿಶ್ವಾಮಿತ್ರನು ರಾಮಲಕ್ಷ್ಮಣರನ್ನು ಮುಂದಿಟ್ಟು ನಡೆತರುವುದು. ರಾಮಾಗಮನದಿಂದ ಶಾಪವಿಮೋಚನಹೊಂದಿ ದಿವ್ಯಕಾಂತಿಪೂರ್ಣಳಾದ ಅಹಲ್ಯೆಯು ಪೂಜಾಪಾತ್ರಗಳೊಡನೆ ಬಂದು ರಾಮಾದಿಗಳನ್ನು ಇದಿರ್ಗೊಂಡು ಸತ್ಕರಿಸಿ, ಪೂಜಿಸಿ, ನಮಿಸಿ ಸ್ತುತಿಸುವುದು. ದೇವದುಂದುಭಿಗಳೊಡನೆ ಪುಷ್ಪವೃಷ್ಟಿಯೂ, ಅಪ್ಸರೆಯರ ನಾಟ್ಯವೂ; ಬಳಿಕ ಗೌತಮರ ಪ್ರವೇಶ, ರಾಮಲಕ್ಷ್ಮಣರನ್ನೂ ವಿಶ್ವಾಮಿತ್ರನ ಅಭಿನಂದನವನ್ನೂ ಸಾದರದಿಂದ ಸ್ವೀಕರಿಸಿ ಗೌತಮನು ಪಾವನೆಯಾಗಿ ಬಂದಡಿಗೆರಗಿದ ಪತ್ನಿಯನ್ನು ಪರಿಗ್ರಹಿಸಿ ಸಾನುಜನಾದ ರಾಮನನ್ನು ಸ್ತುತಿಸಿ ಮಿಥಿಲಾನಗರಕ್ಕೆ ತೆರಳಲು ತ್ವರೆಪಡಿಸಿ ತಾನು ಪತ್ನಿಯೊಡನೆ ತಪಸ್ಸಿಗಾಗಿ ತೆರಳುವುದು.

### ಅಂಕ ೨೯. ಪುಟಗಳು ೬೯–೯೦

ಯಾಗಶಾಲೆಯಲ್ಲಿ ಋತ್ವಿಕ್ಪುರೋಹಿತರೊಡನೆ ಕುಳಿತಿರುವ ಜನಕರಾಯನ ಬಳಿಗೆ ವಟುಗಳು ಬಂದು ರಾಮಲಕ್ಷ್ಮಣರೊಡಗೊಂಡು ವಿಶ್ವಾಮಿತ್ರನು ಯಾಗ

ಶಾಲೆಗೆ ಬಂದಿರುವನೆಂದು ಹೇಳುವುದು, ಜನಕನು ಪುರೋಹಿತನಾದ ಶತಾನಂದನನ್ನು ಋತ್ವಿಕ್ಕುಗಳೊಡನೆ ಕಳುಹುವುದು. ಶತಾನಂದನು ರಾಮಲಕ್ಷ್ಮಣರೊಡನೆ ವಿಶ್ವಾಮಿತ್ರನನ್ನೂ ಸನ್ಮಾನಪೂರ್ವಕ ಕರೆದುಕೊಂಡುಬರುವುದು. ಸಾಮಾತ್ಯನಾಗಿ ಜನಕನು ಮುಂದೆ ಬಂದು ವಿಶ್ವಾಮಿತ್ರನನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ತನ್ನ ಸಂತೋಷವನ್ನು ನಿವೇದಿಸಿ ರಾಮಲಕ್ಷ್ಮಣರ ವೃತ್ತಾಂತವನ್ನು ಕುತೂಹಲ ದಿಂದ ಕೇಳುವುದು. ವಿಶ್ವಾಮಿತ್ರನು ರಾಮಲಕ್ಷ್ಮಣರ ಪರಿಚಯವನ್ನುಂಟುಮಾಡಿ ತಾನು ಯಜ್ಞಸಂರಕ್ಷಣಕ್ಕಾಗಿ ದಶರಥನನ್ನು ಕೇಳಿ ಅವರೀರ್ವರನ್ನೂ ಕರೆದುಕೊಂಡು ಬಂದುದನ್ನೂ ಅವರು ಮಾಡಿದ ಸಾಹಸಕಾರ್ಯಗಳನ್ನೂ ಅವರು ತನ್ನೊಡನೆ ಜನಕನ ಯಜ್ಞವನ್ನು ನೋಡಲು ಬಂದಿರುವದನ್ನೂ ತಿಳಿಹುವುದು. ಜನಕಾದಿಗಳು ಆಶ್ಚರ್ಯ ಮಗ್ನರಾಗುವುದು ಶತಾನಂದನು ತನ್ನ ತಾಯಿಯಾದ ಅಹಲ್ಯೆಯ ವೃತ್ತಾಂತವನ್ನು ತಿಳಿದು ರಾಮಲಕ್ಷ್ಮಣರನ್ನು ಸ್ತುತಿಸಿ ಕೃತಜ್ಞತೆಯಿಂದ ವಿಶ್ವಾಮಿತ್ರನ ಪೂರ್ವ ವೃತ್ತಾಂತವನ್ನೆಲ್ಲಾ-ಕಾಮಧೇನುವಿಗಾಗಿ ವಸಿಷ್ಠರಲ್ಲಿ ಹೋರಾಡಿ ಕೌಶಿಕನು ಭಂಗ ಹೊಂದಿ ಹೊರಟುಹೋಗಿ ತಪಸ್ಸು ಮಾಡಿದುದರಿಂದ ಬ್ರಹ್ಮರ್ಷಿಯಾಗುವವರೆಗೂ ವಿವರಿಸುವುದು. ಜನಕನು ವಿಶ್ವಾಮಿತ್ರನನ್ನು ರಾಮಲಕ್ಷ್ಮಣರೊಡನೆ ವಿಶ್ರಮಿಸಿ ಕೊಂಡಿರಬೇಕೆಂದೂ ಮರುದಿನ ಅರಮನೆಗೆ ಚಿತ್ತೈಸಬೇಕೆಂದೂ ಪ್ರಾರ್ಥಿಸುವುದು. ಮರುದಿನ ಉದಯದಲ್ಲಿ ಅರಮನೆಯಲ್ಲಿ ಜಾನಕೀ ಊರ್ಮಿಳೆಯರು ಸಖಿಯೊಡನೆ ರಾಮಾಗಮನ ವೃತ್ತಾಂತವನ್ನು ಪ್ರಸ್ತಾಪಿಸುತ್ತಿರುವುದು. ಕಂಚುಕಿ ಬಂದು ಅವರನ್ನು ಕರೆದೊಯ್ಯುವುದು. ಅರಮನೆಯಲ್ಲಿ ಸಪರಿವಾರನಾದ ಜನಕನು ನಿರೀಕ್ಷಿಸುತ್ತಿರುವುದು. ರಾಮಲಕ್ಷ್ಮಣರೊಡಗೂಡಿದ ವಿಶ್ವಾಮಿತ್ರನನ್ನು ಶತಾನಂದನು ಕರೆದುಕೊಂಡು ಬರುವುದು. ಸಪರಿವಾರನಾದ ಜನಕನು ಬಂದು ನಮಸ್ಕರಿಸಿ ಸನ್ಮಾನದಿಂದ ಕುಳ್ಳಿರಿಸುವುದು ವಿಶ್ವಾಮಿತ್ರನು ಸುನಾಭಧನುಸ್ಸನ್ನು ತರಿಸಿ ರಾಮಲಕ್ಷ್ಮಣರಿಗೆ ತೋರಿಸಲು ಹೇಳುವುದು. ಜನಕನು ಧನುಸ್ಸನ್ನು ತರಿಸಿ ಅದರ ಪೂರ್ವವೃತ್ತವನ್ನು ಹೇಳಿ ರಾಮಲಕ್ಷ್ಮಣರನ್ನು ಧನುಸ್ಸಿನ ಬಳಿಗೆ ಕಳುಹುವುದು. ರಾಮನು ಸಾನುಜನಾಗಿ ಧನುಸ್ಸಿನ ಬಳಿಗೆ ಬಂದುನೋಡಿ ಜನಕ-ಜನಕಪುತ್ರರ ಸಮ್ಮತಿಯಿಂದ ಧನುಸ್ಸನ್ನು ಹಿಡಿದು ಬಗ್ಗಿಸಿ ಮುರಿವುದು ಸಮಸ್ತರೂ ಜಯಜಯಕಾರ ಮಾಡುವುದು. ಜನಕಪುತ್ರನು ರಾಮಲಕ್ಷ್ಮಣರನ್ನು ಆಲಿಂಗಿಸಿ

ಆದರದಿಂದ ಜನಕನ ಬಳಿಗೆ ಕರೆದೊಯ್ಯುವುದು. ಜನಕನು ಸಂತೋಷಪರವಶನಾಗಿ ರಾಮಲಕ್ಷ್ಮಣರನ್ನು ಶ್ಲಾಘಿಸಿ ಸೀತಾವಿವಾಹಕ್ಕಾಗಿ ದಶರಥನನ್ನು ಕರೆಯಿಸಲು ವಿಶ್ವಾಮಿತ್ರನ ಅಪ್ಪಣೆ ಕೇಳುವುದು. ವಿಶ್ವಾಮಿತ್ರನು ಅನುಮತಿಯನ್ನೀವುದು. ಸೀತಾ ಊರ್ಮಿಳೆಯರು ಬಂದು ವಿಶ್ವಾಮಿತ್ರನಿಗೆ ಜನಕನ ಅನುಮತಿಯಂತೆ ನಮಸ್ಕರಿಸುವುದು. ಸೀತೆ ಅಣ್ಣನ ಅಭಿಮತದಂತೆ ರಾಮನಿಗೆ ಜಯಮಾಲಿಕೆಯನ್ನೊಪ್ಪಿಸುವುದು. ಶತಾನಂದ ವಿಶ್ವಾಮಿತ್ರರ ಅಪ್ಪಣೆಯಂತೆ ಜನಕನು ವಿವಾಹಕಾರ್ಯದಲ್ಲಿ ಉದ್ಯುಕ್ತನಾಗುವುದು.

ಅಂಕ ೬. ಪುಟಗಳು. ೯೦-೧೧೨.

ಜನಕರಾಯನ ಅರಮನೆಯ ಮೇಲ್ಗಡೆ-ಸಿದ್ಧಚಾರಣರ ಪ್ರವೇಶ:—ಜನಕರಾಯನ ಗುಣನಿರೂಪಣ, ದಶರಥರಾಯನ ವೈಭವ ವರ್ಣನೆ—ಸೀತಾ-ರಾಮಚಂದ್ರರಿಗೆ ಜನಕರೆನ್ನಿಸಿದ ಜನಕ-ದಶರಥರಾಯರ ಸುಕೃತವನ್ನು ಕುರಿತು ಶ್ಲಾಘನೆ. ಸುಕುಮಾರರ ವಿವಾಹಕ್ಕಾಗಿ ದಶರಥನು ಮಾಡಿದ ದಾನಧರ್ಮಗಳ ವಿವರಣೆ. ಭರತನ ಸೋದರಮಾವನೂ, ತನ್ನ ಮೈದುನನೂ ಆದ ಯುಧಾಜಿತ್ತುವನ್ನು ದಶರಥನು ಸನ್ಮಾನಿಸಿದುದು. ಜನಕನು ಅನುಜನಾದ ಕುಶಧ್ವಜನನ್ನು ಜೊತೆಗೊಂಡು ದಶರಥಾದಿಗಳನ್ನು ಸನ್ಮಾನಿಸಿ ಶತಾನಂದನೊಡನೆ ವಸಿಷ್ಠ, ವಿಶ್ವಾಮಿತ್ರರಿಗೆ ಸರ್ವಸ್ವಾತಂತ್ರ್ಯವನ್ನೂ ಒಪ್ಪಿಸಿದುದು. ರಾಮಾದಿವರರನ್ನು ಕರೆದುಕೊಂಡು ಬರಲು ಜನಕಪುತ್ರನು ಹೊರಡುವುದು. ಸಿದ್ಧಚಾರಣರು ಮರೆಯಾಗುವುದು. ವಸಿಷ್ಠನು ದಶರಥನ ಅಭಿಲಾಷೆಯಂತೆ ವಿವಾಹಕ್ಕೆ ತ್ವರೆಪಡಿಸಲು ಜನಕನ ಬಳಿಗೆ ಬರುವುದು. ಜನಕನು ಸಂತೋಷದಿಂದ ವರರನ್ನೂ ದಶರಥ ವಸಿಷ್ಠಾದಿಗಳನ್ನೂ ಇದಿರ್ಗೊಂಡು ಕರೆದುಕೊಂಡು ಬರುವುದು. ವಸಿಷ್ಠ-ವಿಶ್ವಾಮಿತ್ರ-ಶತಾನಂದರ ಅನುಮತಿಯಂತೆ ಜನಕನು ರಾಮಲಕ್ಷ್ಮಣರಿಗೆ ಸೀತಾ ಊರ್ಮಿಳೆಯರನ್ನೂ, ಕುಶಧ್ವಜನು ಭರತ ಶತ್ರುಘ್ನರಿಗೆ ಮಾಂಡವಿ ಶ್ರುತಕೀರ್ತಿಯರನ್ನೂ ಒಪ್ಪಿಸುವುದು. ಋಷಿಗಳ ಬ್ರಾಹ್ಮಣರ ಸ್ವಸ್ತಿವಚನ.

ವಿಶ್ವಾಮಿತ್ರನು ತಪಸ್ಸಿಗಾಗಿ ಹೊರಡಲು ಅನುಮತಿ ಕೇಳುವುದು ವಸಿಷ್ಠ-ಶತಾನಂದರೂ, ಜನಕ-ದಶರಥರೂ-ವಿವಾಹವನ್ನು ಸಾಂಗಗೊಳಿಸಿ ತೆರಳಬೇಕೆಂದು ಹೇಳಿ ಒಪ್ಪಿಸುವುದು ಹೋಮ-ಪ್ರದಕ್ಷಿಣಾದಿಗಳಿಗಾಗಿ ದೇವತಾಸನ್ನಿಧಿಗೆಂದು ತೆರಳುವುದು.

ರಾಜಮಾರ್ಗದಲ್ಲಿ ದಕ್ಷಿಣತಾಂಬೂಲಗಳನ್ನು ಪಡೆದು ಬಂದ ಬ್ರಾಹ್ಮಣರ ಪ್ರವೇಶ-ಪುರಸ್ಕಾರ ಸಂಭಾಷಣ, ಜನಕರಾಯನ ಸಂದೇಶದಂತೆ ಶ್ವಶುರಗೃಹಕ್ಕೆ ತೆರಳುವ ರಾಜಪುತ್ರಿಯರ ಉತ್ಸವವನ್ನು ನೋಡಲು ತೆರಳುವುದು. ಸುಕುಮಾರರನ್ನೂ ವಸಿಷ್ಠ ವಾಮದೇವಾದಿ ಋಷಿಗಳನ್ನೂ ಜೊತೆಗೊಂಡು ಸಾನುಜನಾದ ಜನಕನೊಡನೆ ಮಾತನಾಡುತ್ತ ಬರುವುದು. ದಶರಥನು ಮುಂದರಿದು ಅಪಶಕುನವನ್ನು ಕಂಡು ಶಂಕಿಸುವುದು. ವಸಿಷ್ಠನು ಶುಭಶಕುನಗಳನ್ನು ನಿರೂಪಿಸಿ ಸಮಾಧಾನಪಡಿಸುವುದು. ಪರಶುರಾಮನ (ಭಾರ್ಗವ) ಆಗಮನ. ಸಮಸ್ತರೂ ಸ್ತಬ್ಧರಾಗುವುದು. ವಸಿಷ್ಠನ ಕುಶಲಪ್ರಶ್ನೆಯನ್ನು ಕೇಳಿ ಭಾರ್ಗವನು ದಶರಥನ ದೈನ್ಯಪ್ರಾರ್ಥನೆಯನ್ನು ಗಮನಿಸದೆ ರಾಮನ ಬಳಿಗೆ ಬರುವುದು ರಾಮಭಾರ್ಗವರಾಮರ ಸಂಭಾಷಣ. ವಿಷ್ಣು ಧನುಸ್ಸಿನ ಪ್ರಾಶಸ್ತ್ಯವನ್ನು ಹೇಳಿ ರಾಮನನ್ನು ಕೆಣಕಿ ಮಾತನಾಡಿ ವಿಷ್ಣುಧನುಸ್ಸನ್ನು ಬಾಗಿಸಲು ಹೇಳುವುದು. ರಾಮನು ವಿಷ್ಣುಧನುಸ್ಸನ್ನು ತೆಗೆದು ಲೀಲಾಜಾಲವಾಗಿ ಬಾಗಿಸಿ ಹೆದೆಯೇರಿಸಿ ಬಾಣವನ್ನು ಹೂಡಿ ಭಾರ್ಗವನನ್ನು ದರ್ಪದಿಂದ (ನೋಡಿ) ಮನ್ನಿಸಿ ಬಾಣಕ್ಕೆ ಆಹುತಿಯನ್ನು ಕೊಡಹೇಳುವುದು. ಭಾರ್ಗವರಾಮನು ದಿವ್ಯದೃಷ್ಟಿಯಿಂದ ನೋಡಿ ದಶರಥರಾಮನನ್ನು ಪರಮಾತ್ಮನೆಂದರಿತು ಆತ್ಮಸಮರ್ಪಣಮಾಡಿ ಸ್ತುತಿಸಿ ಬಾಣಕ್ಕೆ ಆಹುತಿಯಾಗಿ ತನ್ನ ತಪೋಬಲದಿಂದಾರ್ಜಿಸಿದ್ದ ಪುಣ್ಯಲೋಕಗಳ ಗಮನಶಕ್ತಿಯನ್ನರ್ಪಿಸಿ ರಾಮನನ್ನು ಸ್ತುತಿಸುವುದು ರಾಮಲಕ್ಷ್ಮಣರು ದಶರಥನನ್ನು ಸಂತೈಸಿ ಎಚ್ಚರಿಸುವುದು ವಸಿಷ್ಠಾದಿ ಸರ್ವರೂ ರಾಮನನ್ನು ಕೊಂಡಾಡುವುದು. ಗಗನದಲ್ಲಿ ದೇವಗಂಧರ್ವ ಸಿದ್ಧವಿದ್ಯಾಧರರೂ ಜಯಜಯಕಾರಮಾಡುತ್ತ ಪುಷ್ಪವೃಷ್ಟಿಕರೆವುದು. ಭಾರ್ಗವನು ರಾಮನಲ್ಲಿ ತಾನು ತಪಸ್ಸಿಗೆ ತೆರಳಲು ಅಪ್ಪಣೆಹೊಂದಿ ಋಷಿಗಳೊಡನೆ ಸಾನುಜನಾಗಿ ಪತ್ನೀಸಹಿತ ರಥಾರೂಢನಾದ ಭಗವಂತನಾದ ರಾಮನಿಗೆ ಮಂಗಳಾಶಾಸನವನ್ನು ಮಾಡುವುದು.

ಮಂಗಳಂ.

|| ಶ್ರೀ ||

# ಪ್ರಧಾನ ಪಾತ್ರಗಳು

---

೧. ದಶರಥ (ಅಯೋಧ್ಯಾಧಿಪತಿ, ರಾಮನ ತಂದೆ)
೨. ವಸಿಷ್ಠ (ದಶರಥನ ಕುಲಗುರು)
೩. ಜನಕ (ಮಿಥಿಲಾಧಿಪತಿ, ರಾಮಾದಿಗಳ ಮಾವ)
೪. ಶತಾನಂದ (ಜನಕನ ಪುರೋಹಿತ)
೫. ಕುಶಧ್ವಜ (ಜನಕನ ಸೋದರ)
೬. ಲಕ್ಷ್ಮೀನಿಧಿ (ಜನಕನ ಪುತ್ರ)
೭. ಶ್ರೀ ರಾಮ (ದಶರಥನ ಜೇಷ್ಠ ಪುತ್ರ-ಕಥಾನಾಯಕ)
೮. ಲಕ್ಷ್ಮಣ
೯. ಭರತ
೧೦. ಶತ್ರುಘ್ನ
(೮-೧೦: ದಶರಥನ ಪುತ್ರರು ಮತ್ತು ರಾಮನ ತಮ್ಮಂದಿರು)
೧೧. ವಿಶ್ವಾಮಿತ್ರ (ಶ್ರೀರಾಮನ ಅಸ್ತ್ರಾಚಾರ್ಯ)
೧೨. ಭಾರ್ಗವರಾಮ (ರಾಮನ ಪ್ರತಿಸ್ಪರ್ಧಿ-ಜಮದಗ್ನಿ ಪುತ್ರ)
೧೩ ಗೌತಮ (ಶತಾನಂದನ ತಂದೆ)
೧೪. ಅಹಲ್ಯಾ (ಗೌತಮ ಪತ್ನಿ-ಶತಾನಂದನ ತಾಯಿ)
೧೫. ಸೀತಾ
೧೬. ಊರ್ಮಿಳಾ
(೧೫-೧೬: ಜನಕಪುತ್ರಿಯರು-ಶ್ರೀರಾಮಲಕ್ಷ್ಮಣರ ಪತ್ನಿಯರು)
೧೭. ಮಾಂಡವೀ
೧೮. ಶ್ರುತಕೀರ್ತಿ
(೧೭-೧೮: ಕುಶಧ್ವಜ ಪುತ್ರಿಯರು-ಭರತ ಶತ್ರುಘ್ನರ ಪತ್ನಿಯರು)
೧೯. ತಾಟಕಿ (ರಾವಣನ ಕಡೆಯ ರಾಕ್ಷಸಿ)
೨೦. ಮಾರೀಚ (ತಾಟಕಿಯ ಮಗ)
೨೧. ಸುಬಾಹು (ತಾಟಕಿಯ ಅನುಚರ)

ಇವರಲ್ಲದೆ ಮಂತ್ರಿಸೇನಾಪತಿಗಳು, ರಾಜಕಂಚುಕಿಗಳು, ಚಾರರು, ಸಖಿ, ವಾಮದೇವಾದಿ ಋಷಿಗಳು, ಬ್ರಾಹ್ಮಣರು, ಋಷಿಪುತ್ರರು, ಬ್ರಹ್ಮ-ಇಂದ್ರಾದಿ ದೇವತೆಗಳು, ಸಿದ್ಧಚಾರಣರು-ಇತ್ಯಾದಿ-ಇತ್ಯಾದಿ.

|| ಶ್ರೀಃ ||

ಶ್ರೀರಾಘವಂ ದಶರಥಾತ್ಮಜಮಪ್ರಮೇಯಂ |
ಸೀತಾಪತಿಂ ರಘುವರಾನ್ವಯ ರತ್ನದೀಪಂ ||
ಆಜಾನುಬಾಹುಮರವಿಂದ ದಳಾಯತಾಕ್ಷಂ |
ರಾಮಂ ನಿಶಾಚರವಿನಾಶಕರಂ ನಮಾಮಿ ||

# ಭಾರ್ಗವ ಗರ್ವಭಂಗಂ



(ನಾಂದಿ)

"ಸಿದ್ಧಿಂ ಸರ್ವಾಣಿ ಭೂತಾನಿ ಭೂತಾನಾಂ ಚೈವಯಃ ಪ್ರಭುಃ |
ದಾಸ್ಯನ್ತಿ ಮಮಯೇ ಚಾನ್ಯೇ ಹ್ರದ್ವಷ್ಟಾಃ ಪಥಿಗೋಚರಾಃ ||" ಅ ೧.||

(ಸೂತ್ರಧಾರನ ಪ್ರವೇಶ)

**ಸೂತ್ರ** :—(ಅಂಜಲೀಬದ್ಧನಾಗಿ ಮೇಲೆ ನೋಡಿ)

"ಯಸ್ಯಾವತಾರಚರಿತಾನಿ ವಿರಿಂಚಿಲೋಕೇ |
ಗಾಯನ್ತಿ ನಾರದಮುಖಾ ಭವಪದ್ಮಜಾದ್ಯಾಃ ||
ಆನಂದಜಾಶ್ರು ಪರಿಷಿಕ್ತ ಕುಚಾಗ್ರಸೀಮಾ |
ವಾಗೀಶ್ವರೀಜ ತಮಹಂ ಶರಣಂ ಪ್ರಪದ್ಯೆ || [ಅ. ೨.]

(ಪುಷ್ಪಾಂಜಲಿಯನ್ನೊಪ್ಪಿಸಿ, ಸಭೆಯಕಡೆ ನೋಡಿ)

ಮಹಾತ್ಮರಿಗೆ ವಂದನೆ ! ಮಹಾನುಭಾವರ ಸೇವೆಯು ಸುಲಭವಾಗಿ ಲಭಿಸತಕ್ಕುದಲ್ಲ. ಪೂರ್ವಸುಕೃತದಿಂದ ಲಭ್ಯವಾಗಿರುವೀ ಮಹಾತ್ಮರ ಸಂದರ್ಶನವನ್ನು ಊರ್ಜಿತಗೊಳಿಸಬೇಕಲ್ಲವೆ ? (ಆಲೋಚಿಸಿ) ಆಹಾ, ನೆನಪಾಯಿತು. ಇರಲಿ, ನನ್ನ ಸಮಸ್ತ ಧರ್ಮ-ಕರ್ಮಗಳಿಗೂ

ಸಹಾಯಕಳಾಗಿರುವ ಭಾರ್ಯೆಯ ಸಹಾಯದಿಂದ ಇವರನ್ನು ಯಥಾ ಯೋಗ್ಯವಾಗಿ ಸೇವಿಸಿ ಸುಕೃತವನ್ನು ಊರ್ಜಿತಪಡಿಸಿಕೊಳ್ಳುವೆನು. (ತೆರೆಯಕಡೆಗೆ ತಿರುಗಿ) ಆರ್ಯೆ ! ಅವಕಾಶವಾಗಿದ್ದರೆ,—

ನಟಿ :—(ಪ್ರವೇಶಿಸಿ) ಆರ್ಯಪುತ್ರ ! ಕರೆದುದೇಕೆ ?

**ಸೂತ್ರ** :—ತಿಳಿದೇ ಇಲ್ಲವೆ ? ನನ್ನ ಒಬ್ಬನಿಂದ ಸಾಧಿಸಲಾಗದ ಕಾರ್ಯದಲ್ಲಿ ನಿನ್ನ ಸಮಯೋಚಿತ ಸಹಾಯವು ಅಪೇಕ್ಷಣೀಯವಲ್ಲವೆ ?

ನಟಿ :—ಸಮರ್ಥನಾದ ನಿನಗೆ ಸಾಧ್ಯವಾಗದ ಕಾರ್ಯವಾವುದು ?—ಅದನ್ನು ಸಾಧಿಸಲು ನಾನು ಸಹಾಯಮಾಡುವುದೆಂದರೆ ನನ್ನ ಶಕ್ತಿಯೆಷ್ಟರದು ?

**ಸೂತ್ರ** :—ಹಾಗಲ್ಲ ; ಆರ್ಯೆ ! ಹುಲ್ಲುಕಡ್ಡಿಯಿಂದಕೂಡ ಮಹತ್ಕಾರ್ಯಸಿದ್ಧಿಯಾಗುವುದುಂಟು. ಎಂತಹ ಮಹಾಮಹಿಮರಾದರೂ ಸಂದರ್ಭವೊದಗಿದಾಗ ಅತ್ಯಲ್ಪರೆನಿಸಿದವರಿಂದಲೂ ಕಾರ್ಯವನ್ನು ನಡೆಯಿಸುವರು. ಎಂದಬಳಿಕ, ಅರ್ಧಾಂಗಿಯೆನಿಸಿದ ಅಂಗನೆಯಿಂದ ಸಹಾಯವಾಗುವುದನ್ನು ಹೇಳಬೇಕೇ ? ಅದಿರಲಿ. ನೀನು ಅವುದೋ ಸಡಗರದ ಕೆಲಸದಲ್ಲಿದ್ದಂತೆ ಊಹಿಸುವೆನು. ನಿಜವೆ ?

ನಟಿ :—ಅಹುದು. ಕ್ಷಿಪ್ರದಲ್ಲಿಯೇ ನಡೆಯಬೇಕಾಗಿರುವ ನಮ್ಮ ಕಮಲೆಯ ಮದುವೆಗೆ ಸಾಹಿತ್ಯಗಳನ್ನು ಸಿದ್ಧಪಡಿಸುತ್ತಿದ್ದೆನು.

**ಸೂತ್ರ** :—(ಕುತೂಹಲದಿಂದ) ಕಮಲೆಗೆ ಇನ್ನೂ ವರನೇ ಗೊತ್ತಾಗಿಲ್ಲವಷ್ಟೆ ? ಎಲ್ಲಿಯಾದರೂ ನೋಡಿರುವೆಯೊ ?

ನಟಿ :—ನಾನೆಲ್ಲಿ ನೋಡಬಲ್ಲೆ ? ವಿವಾಹಕಾಲವು ಅತಿಕ್ರಮಿಸುತ್ತ ಬಂದಿರುವುದರಿಂದ ಇದೇ ಮೊದಲಿನ ಲಗ್ನದಲ್ಲಿಯೇ ಮದುವೆಯನ್ನು ಮಾಡಬೇಕೆಂದು ಆಶೆ. ದೇವರು ಸಹಾಯಮಾಡಬೇಕು.

ದೈವನಿಯಾಮಕದಂತೆ ವರನೇನೋ ನಿಷ್ಕರ್ಷೆಯಾಗಿಯೇ ಇರಬಹುದು. ಸಕಾಲದಲ್ಲಿ ಮೈದೋರಲೂಬಹುದು. ನಮ್ಮ ಪ್ರಯತ್ನವೆಲ್ಲಾ ಆಗಿದ್ದರೆ ಅನುಕೂಲ !

**ಸೂತ್ರ** :—ಅದೇನೋ ನಿಜ ! ನಾಳೆಯಾಗಬೇಕಾದ ಕೆಲಸಕ್ಕೆ ಇಂದೇ ಅಣಿಮಾಡಿಡುವುದು ಅಂಗನಾಮಣಿಯರಿಗೆ ತಕ್ಕುದೇ ಸರಿ. ಆದರೆ, (ನಸುನಗುತ್ತ) ಜನಕರಾಯನ ಸುಕುಮಾರಿಗೆ ಸ್ವಯಂವರವನ್ನು ನಡೆಯಿಸಿದಂತೆ ನೀನೂ ನಡೆಯಿಸುವೆಯೇನು ?

ನಟಿ :—ಆರ್ಯಪುತ್ರ ! ಜನಕಮಹಾರಾಜನು ಸ್ವಯಂವರವೆಂದು ಪ್ರಸಿದ್ಧಿಪಡಿಸಿದ್ದನಾದರೂ ಜಗನ್ಮಾತೆಯಾದ ಜಾನಕಿಗೆ ವಲ್ಲಭನಾದ ಪರಮಾತ್ಮನನ್ನು ಸಕಲ ಪಾಮರರೂ ನೋಡಿ ಧನ್ಯರಾಗಲೆಂದು ಮಾಡಿದ್ದುದಾಗಿ ನಿನ್ನಿಂದಲೇ ಕೇಳಿ ತಿಳಿದಿರುವೆನು. ಹಾಗೆಯೇ ನಮ್ಮ ಕಮಲೆಯ ಮನೋವಲ್ಲಭನೂ ಸಕಾಲದಲ್ಲಿ ಗೋಚರಕ್ಕೆ ಬರಬಹುವೆಂದಿಚ್ಛಿಸುವೆನು.

**ಸೂತ್ರ** :—ಸರಿಯೆ ! ಈಗ ನಮ್ಮ ಪಾಲಿಗೆ ಮಹಾಕಾರ್ಯಭಾರವೊಂದು ಬದ್ದಿರಲು, ನಾವದನ್ನು ನಿರ್ವಹಿಸುವ ಮೊದಲು, ಗೃಹಕೃತ್ಯವಿಚಾರಗಳನ್ನಿಲ್ಲಿ ಪ್ರಸ್ತಾಪಿಸುತ್ತ ಕುಳಿತರೆ ಹೇಗೆ ?

ನಟಿ :—ಅಂತಹ ಕಾರ್ಯಭಾರವಾವುದು ?

**ಸೂತ್ರ** :—(ಸಭೆಯ ಕಡೆ ಕೈತೋರಿಸಿ) ಸಕಲ ಶಾಸ್ತ್ರಪಾರಂಗತರೂ ಕಲಾಕೋವಿದರೂ ಲೌಕಿಕ ವ್ಯವಹಾರಚತುರರೂ ಪಾರಲೌಕಿಕ ಕ್ರಿಯಾನಿರತರೂ ಆದ ಮಹಾನುಭಾವರಿಂದ ತುಂಬಿರುವ ಈ ಸಭೆಯನ್ನು ನೋಡು ; ಮತ್ತೂ, ನೋಡು ನೋಡು. ಗುರುಜನವಿಧೇಯರೂ ಶ್ರದ್ಧಾಭಕ್ತಿಗೌರವಸಮನ್ವಿತರೂ ನಿರಲಸರೂ ಆದ ಈ ವಿದ್ಯಾರ್ಥಿಗಳ ಸಮೂಹವನ್ನು ನೋಡು [ಅ. ೩]

ನಟಿ :—ಆರ್ಯಪುತ್ರ ! ಕಲ್ಯಾಣಮಂಟಪದಂತೆಸೆವ ಈ ಸಭೆಯು ನೇತ್ರಾನಂದಕರಮಾತ್ರವೇ ಆಗಿರದೆ ಹೃದಯಾನಂದಕರವಾಗಿಯೂ ಇರುವುದು.

ಸೂತ್ರ :—ಆದುದರಿಂದಲೇ ಇಂತಹ ಆನಂದವನ್ನು ಸಾರ್ಥಕಪಡಿಸಿಕೊಳ್ಳಬೇಕೆಂದು ಸಂಕಲ್ಪಿಸಿರುವೆನು.

ನಟಿ :—ಯಾವ ರೀತಿಯಲ್ಲಿ ?

ಸೂತ್ರ :—ಭಗವಂತನ ಸಚ್ಚಾರಿತ್ರ್ಯದಿಂದ ಕೂಡಿದುದಾಗಿಯೂ ವೀರ, ಕರುಣಾ, ಶೃಂಗಾರ ರಸಗಳಿಂದ ರಂಜಿಸುವುದಾಗಿಯೂ ಇರುವ ರೂಪಕಾಭಿನಯ ಕಾರ್ಯದಿಂದ,—

ನಟಿ :—ಆಗಬಹುದು. ಶ್ರೀರಾಮಚಂದ್ರನ ಚರಿತೆಯು ಅನೇಕ ಬಗೆಯಾಗಿ ನಾಟಕಗಳಾಗಿ ರಚಿಸಲ್ಪಟ್ಟಿರುವುವು, ಅವುಗಳಲ್ಲಿ ಆವುದನ್ನು ಇಂದು ಅಭಿನಯಿಸಬೇಕು ?

ಸೂತ್ರ :—ಇಂದು ಅದಾವುದೂ ಅಲ್ಲ. ಓರ್ವ ವಿದ್ಯಾರ್ಥಿನಿಯಿಂದ ವಿರಚಿತವಾದ "ಭಾರ್ಗವ ಗರ್ವಭಂಗ"ವೆಂಬ ಬಾಲರಾಮ ಚರಿತವನ್ನು ಅಭಿನಯಿಸುವ ಸಂಕಲ್ಪ !

ನಟಿ :—ಆಶ್ಚರ್ಯವಾಶ್ಚರ್ಯವು ! ಆರ್ಯಪುತ್ರ ! ಮಹಾಮಹಾಗಳಾದ ವಿದ್ವಾಂಸರಿಂದ ವಿರಚಿತವಾದ ಉತ್ತಮೋತ್ತಮ ನಾಟಕಗಳು ಎಷ್ಟೋ ಇರುವಾಗ, ಅನಾಮಧೇಯ ವಿದ್ಯಾರ್ಥಿನಿಯೋರ್ವಳಿಂದ ಬರೆಯಲ್ಪಟ್ಟುದನ್ನು ಅಭಿನಯಿಸುವುದೇಕೆ ?

ಸೂತ್ರ :—ಆರ್ಯೆ ! ಹೊಸ ಹೊಸ ವಿಷಯಗಳನ್ನು ಸಂಗ್ರಹಿಸುವುದು ರಸಿಕರ ಮತ್ತು ಗುಣಜ್ಞರಾದ ಸಾಧುಗಳ ಶೀಲವು. ಸುಪ್ರಸಿದ್ಧರಾದ ಪ್ರಾಚೀನಕವಿಗಳಿಂದಲೂ ಪ್ರಖ್ಯಾತರಾದ ಆಧುನಿಕ ಕವಿವರರಿಂದಲೂ ವಿರಚಿತಗಳಾದ ನಾಟಕಗಳನ್ನು ಅವಲೋಕಿಸಿ ತಲೆ

ದೂಗಿರುವರಾದರೂ ಬಾಲಿಶ ವಿದ್ಯಾರ್ಥಿನಿಯೋರ್ವಳು ಶ್ರೀರಾಮ ಚಂದ್ರನ ಬಾಲಚರಿತವನ್ನು ಭಕ್ತಿಭಾವದಿಂದ ಬಾಲಭಾಷೆಯಲ್ಲಿ ರಚಿಸಿ ರುವದನ್ನುಕೂಡ, ಲೋಲಮಾನಸರಾಗಿ ಆಲೋಕಿಸುವರೆಂದೆಣಿಸು. ಬಾಲರ ಭಾಷೆಯನ್ನು ಕೇಳಲು ಲೋಲರಾಗದಿರುವರಾರು ?

ನಟಿ :—(ಶಂಕೆಯಿಂದ) ಆಗಿರಬಹುದು. ಆದರೆ ನನಗೇನೋ ಶಂಕೆಯುಂಟಾಗಿರುವುದು.

ಸೂತ್ರ :—ಶಂಕೆಯೇಕೆ ?

ನಟಿ :—'ಗುರುಜನರ, ಹಿರಿಯರ, ಬಲಾಧಿಕರಾದವರ ಮುಂದೆ ತನ್ನ ಹೆಚ್ಚಳಿಕೆಯನ್ನು ತೋರಿಸಬೇಕೆನ್ನುವವನು ಪರಿಭವ ಹೊಂದದಿರ ಲಾರನು. ಹೇಗೆಂದರೆ, ಕ್ಷತ್ರಿಯಕುಲವಿಧ್ವಂಸಿಯಾದ ಭಾರ್ಗವನು ಕೂಡ, ತಾನೇ ಬಲಾಢ್ಯನೆಂದು ಗರ್ವಿಸಿ ಪರಿಭವಹೊಂದಿದನು!' [ಅ. ೪.]

ಸೂತ್ರ :—(ನಸುನಗುತ್ತ) ಆರ್ಯೆ! ಇಲ್ಲಿ ತನ್ನ ಹೆಚ್ಚಳಿಕೆಯನ್ನು ತೋರುವ ಎಣಿಕೆಯಾಗಲಿ, ಪ್ರತಿಷ್ಠೆ (ಹೆಸರುವಾಸಿ) ಯನ್ನು ಗಳಿಸುವ ಆಶೆಯಾಗಲೀ ಇಲ್ಲ. ಕೇವಲ ಭಕ್ತಿಪಾರವಶ್ಯತೆಯಿಂದ ಭಗವಂತನ ಬಾಲರೂಪದ ಲೀಲಾವಿಭೂತಿಯನ್ನು ವರ್ಣಿಸಿ ಬರೆದುದು ಮಾತ್ರ. ತಿಳಿದವರು ತಪ್ಪು ಒಪ್ಪುಗಳನ್ನು ತಿಳಿಯಿಸಿ ಸವರಿಸಿಕೊಳ್ಳುವರಲ್ಲದೆ ಕೆರಳಿ ಜರಿದು ಬಿಸುಡಲಾರರು. ಒಂದುವೇಳೆ ಇದರಲ್ಲಿ ಅಜ್ಞಾನದೋಷದಿಂದ ತಪ್ಪುಗಳಿದ್ದು, ಇವರದನ್ನು ತಿದ್ದಿದರೂ ಅದರಿಂದ ಆ ವಿದ್ಯಾರ್ಥಿನಿಗೆ ಆದರಣೆ-ಮನ್ನಣೆಯೇ ತೋರಿದಂತಾಗುವುದಲ್ಲದೆ ಪರಿಭವವೆಂದೆಣಿಕೆಯಾ ಗದು. ಹೇಗೆಂದರೆ ಕೇಳು.-ಮಹಾಪರಾಕ್ರಮಿಯಾದ ಭಾರ್ಗವನು ಶ್ರೀರಾಮಚಂದ್ರನಿಂದ ಜಿತನಾದಮಾತ್ರಕ್ಕೆ, ಭಾರ್ಗವನಿಗೆ ಅದು ಪರಿ ಭವವೆಂದೆಣಿಕೆಯಾಗಲಿಲ್ಲ. ಮಹದಾನಂದವೇ ಆಯಿತು. ತತ್ವವಿದರು, 'ಅಹಂಭಾವವು ಆತ್ಮಜ್ಞಾನದಿಂದ ಜಯಿಸಲ್ಪಟ್ಟಿತೆಂದೂ, ಪರಮಾತ್ಮ

ಸಮ್ಮುಖದಲ್ಲಿ ಗರ್ವವು ತಗ್ಗಿ, ಪ್ರೇಮವು ಉಕ್ಕಿ, ಆತ್ಮೀಯಭಾವವು ತಲೆದೋರಿದುದರಿಂದ ಪರತರಾನಂದವನ್ನು ಪಡೆಯಲಾಯಿತೆಂದೂ ತೇಜೋಮಂಡಲದಲ್ಲಿ ಕಿರಣವು ಅಡಕವಾಗಿರುವಂತೆ ಪ್ರತಾಪಾಧಿಕ್ಯಕ್ಕೆ ವಿಧೇಯತೆಯು ತೋರ್ಪಟ್ಟಿತೆಂದೂ ಭಾವಿಸುವರು. ಸಾಮಾನ್ಯರಿಗೆಮಾತ್ರ ಭಾರ್ಗವನು ಬಾಲಮಾತ್ರನಾದ ರಾಮನಿಂದ ಪರಾಜಿತನಾದನೆಂದು ತೋರುವುದು !

ನಟಿ :—ಅಹುದು. ಮಾಯಾಪಾಶಬದ್ಧರಾದವರಿಗೆ ತೋರುವುದು ಹಾಗೆಯೇ ಸರಿ ! ಆರ್ಯಪುತ್ರ ! ಜ್ಞಾನ-ವಯೋ-ಬುದ್ಧಿ-ಪರಾಕ್ರಮ, ಸಾಹಸಾದಿಗಳಿಲ್ಲದರಿಂದಲೂ ವೃದ್ಧನೆನ್ನಿಸಿದ್ದ ಭಾರ್ಗವನು ಬಾಲನಾದ ಶ್ರೀರಾಮನಿಂದ ಪರಾಜಿತನಾದುದೇಕೆ ? ಶ್ರೀರಾಮನು ಭಾರ್ಗವನನ್ನು ಜಯಿಸುವಂತಹ ಮಾಹಾತ್ಮ್ಯೆಯನ್ನು ಪಡೆದುದು ಹೇಗೆ?

ಸೂತ್ರ:—ಆರ್ಯೆ! ಶ್ರೀರಾಮಚಂದ್ರನು ಭಗವದವತಾರವೆಂದು ತಿಳಿದೂ ಹೀಗೆ ಅಡಿಗಡಿಗೆ ಸಂಶಯಪಡುವುದು ಮೋಹದ ಪ್ರಭಾವವೇ ಸರಿ ! ಹೇಳುವೆನು ಕೇಳು. [ಅ. ೬.]

ಆತನೇ ಕ್ಷೀರಾಬ್ಧಿನಿಲಯನೂ ವೈಕುಂಠನಿಕೇತನನೂ ಆದ ರಮಾಪತಿ ! ರಾವಣಾದಿ ಕ್ರೂರರಾಕ್ಷಸರ ಬಾಧೆಯಿಂದ ಕಂಗೆಟ್ಟ ಸುರರು, ಭೂಸುರರು, ಧರಣಿದೇವಿ ಇವರ ಮೊರೆಯನ್ನು ಕೇಳಿ ಕರುಣೆಯಿಂದ ಶ್ರೀಮನ್ನಾರಾಯಣನು ನರಶರೀರಿಯಾಗಿರುವನೆಂದೂ, ಆತನೇ, ಪುತ್ರಾರ್ಥಿಯಾಗಿ ತಪಿಸಿದ ದಶರಥ ಮಹಾರಾಜನಿಗೆ ಪುತ್ರನಾಗಿ, ಆತನ ಪಟ್ಟಮಹಿಷಿಯಾದ ಕೌಸಲ್ಯೆಯ ಗರ್ಭದಲ್ಲಿ ಜನ್ಮವೆತ್ತಿದನು ; ರಘುಕುಲವನ್ನೇ ಪರಮಪವಿತ್ರವೂ, ಸುಪ್ರಸಿದ್ಧವೂ ಆಗಿ ಮಾಡಿದನು. ಕೌಸಲ್ಯಾ ದಶರಥರನ್ನು ಕೃತಕೃತ್ಯರೆನ್ನಿಸಿದನು ! ಕೇಳಿದೆಯಾ ? ಪತಿತಪಾವನನೂ ಪಾವನಾತ್ಮನೂ ಪರಾತ್ಪರನೂ ಆದ ಆ ರಮೇಶನ ಕರಸ್ಪ

ರ್ಶದಿಂದ, ಭಾರ್ಗವನು ಭಗವದಂಶಪುರುಷನಾಗಿದ್ದರೂ ಕಾಲಾವಧಿ ಮೀರಿ, ಗರ್ವದಿಂದುಂಟಾದ ಕಲ್ಮಷವನ್ನು ಕಳೆದು, ಪೂಜ್ಯತೆಯನ್ನೇ ಹೊಂದಿದನು. ಅತ್ಯಂತ ಭಾರವಾದ ವಿಷ್ಣುಧನುಸ್ಸನ್ನೂ ಮುಂದಿನ ಕರ್ತವ್ಯದ ಭಾರವನ್ನೂ ರಾಮಚಂದ್ರನಿಗೆ ಒಪ್ಪಿಸಿ ತಾನು ಕೃತಕೃತ್ಯ ನೆನ್ನಿಸಿದನು.

(ತೆರೆಯಲ್ಲಿ) ಸಾಧು ! ಭರತಪುತ್ರಾ ! ಸಾಧು ಸಾಧು !!

ನಟಿ :—(ಆಶ್ಚರ್ಯದಿಂದ) ಆರ್ಯಪುತ್ರ ! ಅದಾರು ಸಾಧು ವಾದನಮಾಡುವರು ?

ಸೂತ್ರ :—(ಮೇಲೆ ನೋಡಿ) ನೋಡು ನೋಡು. ಗಗನ ಸಂಚಾರಿಗಳಾದ ವಿದ್ಯಾಧರರು ! ಪರಮಾತ್ಮನ ಮಹಿಮಾವರ್ಣನದಿಂದ ಸಂತುಷ್ಟರಾದ ಇವರೇ ಅಭಿನಂದಿಸಿರಬಹುದು.

(ಗಗನದಲ್ಲಿ)—ಶುಭವಾಗಲಿ, ತ್ರಿಲೋಕವಿದಿತ-ವಿಖ್ಯಾತಪ್ರಭಾ ವಶಾಲಿಯಾದ, ಹಟಯೋಗಬಲದಿಂದ ಬ್ರಹ್ಮರ್ಷಿಯೆನಿಸಿದ, ಸೃಷ್ಟಿಕರ್ತ ನಂತೆ ಪುನಸ್ಸೃಷ್ಟಿರಚನಾಕಾರ್ಯದಲ್ಲಿ ತೊಡಗಿದ, ತ್ರಿಶಂಕುಸ್ವರ್ಗನಿರ್ಮಾ ಪಕನಾದ ಗಾಧೇಯಮುನಿಗೆ ಶುಭವಾಗಲಿ; ಪ್ರಚಂಡಶಾಸನನೆನಿಸಿದ ಚಂಡಕೌಶಿಕನಿಗೆ ಇಷ್ಟಾರ್ಥಸಿದ್ಧಿಯಾಗಲಿ !

ಸೂತ್ರ :— (ಸಂಭ್ರಮದಿಂದ) ಆರ್ಯೆ ! ನಾಟಕಾರಂಭವಾ ಯಿತು. ಮಖಸಂರಕ್ಷಣಾರ್ಥವಾಗಿ ರಾಮನನ್ನು ಕರೆದೊಯ್ಯಲು ವಿಶ್ವಾಮಿತ್ರನು ದಶರಥಮಹಾರಾಜನ ಬಳಿಗೆ ಹೊರಟಿರುವನು. ನಡೆ, ನಾವಿಸ್ನು ಮುಂದಿನ ಕಾರ್ಯಸನ್ನಾಹವನ್ನು ಮಾಡುವ.

ನಟಿ :— ಅಪ್ಪಣೆ. (ಇಬ್ಬರೂ ಹೊರಡುವರು)

(ಇದು ಪ್ರಸ್ತಾವನೆ)



# ಪ್ರಥಮಾಂಕಂ.

---

[ಕಮಂಡಲಹಸ್ತನಾಗಿ ಕೃಷ್ಣಾಜಿನಧಾರಿಯಾದ ವಿಶ್ವಾಮಿತ್ರನ ಪ್ರವೇಶ]

(ಸುತ್ತಲೂ ನೋಡಿ) ಆಹಾ! ಇಲ್ಲಿ ಯಾರೂ ಇಲ್ಲ. ಲೀಲಾ ಮಾನುಷವಿಗ್ರಹನಾದ ಭಗವಂತನ ಗುಣವರ್ಣನಮಾಡಿದವರು ಇಲ್ಲಿಲ್ಲ. (ಸ್ವಲ್ಪ ಸುಮ್ಮನಿದ್ದು ತಲೆಯೆತ್ತಿ)

[ಅ. ೭] ಹೇ ದಯಾನಿಧೆ! ನಿನ್ನ ದುಷ್ಟನಿಗ್ರಹಪೂರ್ವಕವಾದ ಶಿಷ್ಟಪರಿಪಾಲನಕಾರ್ಯಕ್ಕೆ ಯಾವಾಗಲೂ ಜಯಜಯಕಾರವಿರಲಿ. ದಶರಥನಂದನ! ಕೌಸಲ್ಯಾನಂದವಿವರ್ಧನ! ಸಮಸ್ತ ಕಲ್ಯಾಣಗುಣ ಪರಿಪೂರ್ಣ! ನಿನಗೆ, ನಿನ್ನೀಲೀಲಾನಂದವಿಭೂತಿಗೆ, ಈ ನಿನ್ನ ಮಾಯಾ ಮಾನುಷವೇಶಕ್ಕೆ ವಿಜಯವಾಗಲಿ! (ನೆಲವನ್ನು ನೋಡುತ್ತ) ನಾನಾ ದರೋ ಒಂದು ಯಾಗವನ್ನು ಮಾಡಲು ಸಂಕಲ್ಪಿಸಿರುವೆನು! ಕ್ರೂರ ರಾದ ಮಾರೀಚ ಸುಬಾಹುಗಳೇ ಮೊದಲಾದ ದಾನವರು, ಲೋಕ ಕಂಟಕನಾದ ರಾವಣಾಸುರನ ಪಕ್ಷದವರು, ಯಜ್ಞವಿಧ್ವಂಸಕರಾಗಿ ಗೋಬ್ರಾಹ್ಮಣಹಿಂಸಕರಾಗಿ, ಸಜ್ಜನವಿದ್ವೇಷಿಗಳಾಗಿ, ಕಾದಿರುವುದ ರಿಂದ ಯಜ್ಞವಿಘ್ನಕಾರಿಗಳನ್ನು ನಿಗ್ರಹಿಸಿ ಕ್ರತುಸಂರಕ್ಷಣೆ ಮಾಡು ವಂಥ ಮಹಾತ್ಮನನ್ನು ಅರಸುತ್ತ ನಾನಿತ್ತ ಬಂದೆನು. ಬರುತ್ತ ದೈವ ಪ್ರೇರಣೆಯಾದಂತೆ ಈ ದಶರಥನ ರಾಜಧಾನಿಯಾದ ಅಯೋಧ್ಯೆಗೇ ಬಂದಿರುವೆನು. ಮೊದಲಿಂದಲೂ ಇಕ್ಷ್ವಾಕುವಂಶದವರೆಂದರೆ ದೇವ-ಬ್ರಾಹ್ಮಣರಿಗೆಲ್ಲಾ ಆಶ್ರಯರು. ದಾನವರಿಗೆ ಶತ್ರುಗಳು; ಆಶ್ರಿತಸಂರ ಕ್ಷಣೆಯಲ್ಲಿಯೂ, ಸತ್ಯವಾಕ್ಪರಿಪಾಲನೆಯಲ್ಲಿಯೂ ಅಗ್ರಗಣ್ಯರಾದ

ವರು. ಅವರಲ್ಲಿಯೂ ದಶರಥಮಹಾರಾಜನಂತೂ ಎಷ್ಟೋಸಾರಿ ದೇವತೆಗಳಿಗೆ ಸಹಾಯವಾಗಿ ದಾನವರೊಡನೆ ಯುದ್ಧಮಾಡಿ, ಪುರುಷಶ್ರೇಷ್ಠನೆನ್ನಿಸಿರುವನು. ಆದರೆ ಈಗ ಆತನ ವಯಸ್ಸು ಅಧಿಕವಾಗಿದ್ದು ಈಗ ತಾನೇ ಪುತ್ರರನ್ನು ಪಡೆದಿರುವೆನೆಂಬ ವ್ಯಾಮೋಹದಿಂದ ನನಗೆ ಸಹಾಯಕನಾಗುವನೋ ಇಲ್ಲವೋ ? ಹಾಗಾದರೆ ನಾನೆಲ್ಲಿಗೆ ಹೋಗಲಿ? ಯಾರ ಸಹಾಯವನ್ನು ಹೊಂದಲಿ ? (ಚಿಂತಿಸುವನು)

|| ಗಗನದಲ್ಲಿ || [ಅ. ಲ] " ಗೋಬ್ರಾಹ್ಮಣಹಿತಾರ್ಥವಾಗಿಯೂ ಭೂಭಾರಪರಿಹಾರಾರ್ಥವಾಗಿಯೂ ರಮಾಕಾಂತನೇ ದಶರಥನಂದನನಾಗಿರುವಲ್ಲಿ ನೀನೇಕೆ ಚಿಂತಿಸುವೆ ?

ವಿಶ್ವಾ:—(ಸಡಗರದಿಂದ ಮೇಲೆ ನೋಡಿ ಕೈಯೆತ್ತಿ) " ವೈಮಾನಿಕರೆ! ಸಮಯೋಚಿತವಾಗಿ ಸೂಚನೆಯನ್ನು ಕೊಟ್ಟುದರಿಂದ ನಿಮಗೆ ಶ್ರೇಯೋಭಿವೃದ್ಧಿಯಾಗುವುದು. (ಸುತ್ತಲೂ ನೋಡಿ) ಆಹಾ! ಅಣುರೇಣು ತೃಣಕಾಷ್ಠಪರಿಪೂರ್ಣನೂ ಅನಾದ್ಯನಂತ ಕಾರಣ-ಕಾರ್ಯಕರ್ತನೂ ಅಪ್ರಮೇಯನೂ ಅಜೇಯನೂ ನಿತ್ಯನೂ ನಿರ್ಮಲನೂ ಶ್ರೀಶೇಷಶಾಯಿಯೂ ಕ್ಷೀರಾಬ್ಧಿನಿಲಯನೂ ಆದ ಶ್ರೀಹರಿಯು, ಇದಕ್ಕಾಗಿಯೇ ಜನ್ಮವೆತ್ತಿರುವನು. ಕಮಲೆಯಾದರೋ ನಿಮಿವಂಶಪ್ರದೀಪನಾದ ಜನಕನ ಅರಮನೆಯಲ್ಲಿ ಬೆಳೆಯುತ್ತಿರುವಳು! [ಆಶ್ಚರ್ಯದಿಂದ] ಅಬ್ಬ! ಅವರಿಬ್ಬರ ಸುಕೃತವೇ ಸುಕೃತವು! ಜಗಜ್ಜನಕನಿಗೇ ಜನಕನಾದ ದಶರಥನ ಪುಣ್ಯಕ್ಕೆ ಎಣೆಯುಂಟೇ? ಜಗನ್ಮಾತೆಗೆ ಪಿತನೆನಿಸುವ ಜನಕನ ಸುಕೃತಕ್ಕೆ ಸಾಟಿಯುಂಟೇ? ಸರಿ. ನಾನಿನ್ನು ದಶರಥಮಹಾರಾಜನ ಪ್ರಸನ್ನತೆಯನ್ನು ಪಡೆದು, ದಶರಥನಂದನನಾದ ರಾಮಭದ್ರನನ್ನು ಕರೆದೊಯ್ದು ದುಷ್ಟರಕ್ಕಸರನ್ನು ನಿಗ್ರಹಿಸಿ, ಕ್ರತುವನ್ನು ಸಾಂಗಗೊಳಿಸಿ, ಆ ಬಳಿಕ ಆತನ ಅನಪಾಯಿನಿಯಾದ ರಮೆಯನ್ನು ಆತನ ಪಾರ್ಶ್ವವರ್ತಿ

ನಿಯಾಗಿ ಮಾಡಿ ಕೃತಾರ್ಥನಾಗುವೆನು. (ಗಮನವನ್ನಭಿನಯಿಸಿ, ಮುಂದೆನೋಡಿ) [ಅ. ೯] ದೇವತೆಗಳಿಗೂ ಕುತೂಹಲಾಧಿಕ್ಯವನ್ನುಂಟು ಮಾಡುತ್ತಿರುವ ಈ ದಶರಥನ ಭಾಗ್ಯವೇ ಭಾಗ್ಯವು! ಭಾಗ್ಯಶಾಲಿಯೂ ಸುಕೃತಿಯೂ ಸದ್ಗುಣಿಯೂ ಆದೀತನ ರಾಜ್ಯಭಾರಕ್ಕೊಳಪಟ್ಟಿರುವ ಕೋಸಲದೇಶದ ವೈಭವವನ್ನೂ, ರಾಜಧಾನಿಯ ಶೋಭೆಯನ್ನೂ ವಿವರಿಸಲಾರಿಗೆ ಅಳವು?

(ತೆರೆಯಲ್ಲಿ ಮೃದಂಗಭೇರೀವಾದ್ಯಗಳಾಗುವವು. ಕಂಚುಕಿಯು ಓಡಿಬರುವನು.)

ವಿಶ್ವಾ:—ಓಹೋ! ಆಗಲೇ ದಶರಥನು ಆಸ್ಥಾನಕ್ಕೆ ಬಂದಂತಿದೆ. (ತಿರುಗಿನೋಡಿ) ಇವನಾರಿರಬಹುದು? || ಪ್ರಕಾಶವಾಗಿ || ಎಲೈ, ನೀನಾರು? ಎಲ್ಲಿಗೆ ಹೊರಟಿರುವೆ?

**ಕಂಚುಕಿ**:—(ಎದುರಾಗಿ ನಿಂತು) ಪೂಜ್ಯರಿಗೆ ವಂದನೆ; ನಾನು-ನಾನು, ದಶರಥಮಹಾರಾಜನ ಕಂಚುಕಿ. ಮಹಾರಾಜನು ಸಿಂಹಾಸನಾಸೀನನಾಗುತ್ತಿರುವನು. ರಾಜಾಜ್ಞೆಯಿಂದ ಸುಕುಮಾರರಾದ ರಾಮಲಕ್ಷ್ಮಣರನ್ನು ನೋಡಲು ಹೋಗಿದ್ದು ಈಗ ರಾಜಾಸ್ಥಾನಕ್ಕೆ ಬರುತ್ತಿರುವೆನು. ತಾವೆಲ್ಲಿಗೆ ಹೋಗಬೇಕು?

ವಿಶ್ವಾ:—ನಾನೂ ರಾಜಾಸ್ಥಾನಕ್ಕೇ ಹೊರಟಿರುವೆನು. ನಡೆ ಹೋಗುವ.

**ಕಂಚುಕಿ**:—ಅಪ್ಪಣೆ, ಬಿಜಯಂಗೆಯ್ಯಬೇಕು. (ಇಬ್ಬರೂ ಹೊರಡುವರು)

——

## ರಾಜಾಸ್ಥಾನ.

[ಸುಮಂತ್ರ, ವಸಿಷ್ಠ, ವಾಮದೇವಾದಿಗಳೊಡನೆ ಪೀಠಸ್ಥನಾದ ದಶರಥನ ಪ್ರವೇಶ.]

ದಶರಥ :—(ವಸಿಷ್ಠರನ್ನು ನೋಡಿ) ಗುರುದೇವ! ರಾಮಾದಿ ಸುಕುಮಾರರು ವಿದ್ಯಾಪಾರಂಗತರಾಗಿರುವರು; ಇನ್ನು ವಿವಾಹ ವನ್ನು ನೆರವೇರಿಸಬಹುದಲ್ಲವೆ?

ವಸಿಷ್ಠ :—ಆಗಬಹುದು; ಆದರೆ, ಮಹಾರಾಜ! ಮೊದಲು ಸುಕುಮಾರರ ವಿದ್ಯಾನೈಪುಣ್ಯವೂ ಧನುರ್ವಿದ್ಯಾಕೌಶಲ್ಯವೂ ದಿಗ್ದರ್ಶನ ವಾಗಬೇಕಲ್ಲವೆ?

(ಚಾರನು ಪ್ರವೇಶಿಸಿ ಕೈಮುಗಿದು) ಮಹಾಪ್ರಭುವಿಗೆ ಮಂಗ ಳವಾಗಲಿ! ಪಟ್ಟೆನಾಮಗಳನ್ನಿಟ್ಟು ನಾರುಬಟ್ಟೆಗಳನ್ನುಟ್ಟು ಜಟೆ ಯನ್ನು ಬಿಟ್ಟು ಕೃಷ್ಣಾಜಿನವನ್ನು ಬಗಲೊಳಗಿಟ್ಟು ಕಟ್ಟಿರಕ ಗೊಂಡಾರೋ ಇತ್ತ ಬರುತ್ತಿರುವರು. [ಅ. ೧೦.]

ದಶ :—ಯಾರೋ ಮಹರ್ಷಿಗಳಿರಬೇಕು, ಬರಲಿ. (ಚಾರನು ಹೋಗುವನು. ಕಂಚುಕಿ ಓಡಿಬರುವನು.)

ಕಂಚುಕಿ :—ಮಹಾಪ್ರಭೋ! ವಿಜಯಿಸು! ಹಟಯೋಗಿ ಗಳಾದ ವಿಶ್ವಾಮಿತ್ರಮಹರ್ಷಿಗಳು ಅತ್ಯವಸರದಿಂದ ಬರುತ್ತಿರುವರು.

ದಶರಥ :—(ಥಟ್ಟನೆದ್ದು ಸುಮಂತ್ರನನ್ನೊಮ್ಮೆನೋಡಿ ಮುಂ ದಕ್ಕಡಿಯಿಡುವನು.)

ಸುಮಂತ್ರ :—(ಮುಂದೆ ಬಂದು ತೆರೆಯಕಡೆ ನೋಡಿ ವಿನ ಯದಿಂದ) ಇತ್ತ ಚಿತ್ತೈಸಬೇಕು.

(ವಿಶ್ವಾಮಿತ್ರನು ಪ್ರವೇಶಿಸುವನು.)

ವಸಿಷ್ಠ :—(ಎದ್ದು ಕೈ ನೀಡಿ) ಸುಖಾಗಮನವಷ್ಟೆ? ಮುನಿ ಶ್ರೇಷ್ಠ!

ವಿಶ್ವಾ :—ತಪೋಗರಿಷ್ಠರಾದ, ಬ್ರಹ್ಮರ್ಷಿಶ್ರೇಷ್ಠರಾದ ವಸಿ ಷ್ಠರ ಮೈತ್ರಿಯಿಂದ ಸಕಲವೂ ಸುಖಕರವೇ ಆಗುವುದು.

ದಶ :—ಮಹಾತ್ಮರಿಗೆ ನಮಸ್ಕರಿಸುವೆನು. ಆಸನದಲ್ಲಿ ಮಂಡಿಸಿ, ಅನುಗ್ರಹಿಸಬೇಕಾಗಿ ಪ್ರಾರ್ಥನೆ

ವಿಶ್ವಾ :—ಶುಭಮಸ್ತು ! ಆರ್ಯ, ವಸಿಷ್ಠರೆ ! ಸಕಲರೊಡನೆ ನೀವೂ ಕುಳಿತುಕೊಳ್ಳಬೇಕು. (ಎಲ್ಲರೂ ಕುಳಿತುಕೊಳ್ಳುವರು.)

ದಶರಥ :—ಪೂಜ್ಯರೇ ! ಪಾದಧೂಳಿಯಿಂದ ಸನ್ನಿವೇಶನೆಯನ್ನು ಪಾವನಮಾಡಿದಿರಿ ; ಸಂದರ್ಶನದ ಅಲಭ್ಯಲಾಭವನ್ನುಂಟುಮಾಡಿ ಧನ್ಯನನ್ನಾಗಿ ಮಾಡಿದಿರಿ. ಅದರಂತೆಯೇ ಆಗಮನದ ಉದ್ದೇಶವೇನಾದರೂ ಇದ್ದರೆ ಕೃಪೆಯಿಂದ ನಿರೂಪಿಸಬೇಕು.

ವಿಶ್ವಾ :—ರಾಜೇಂದ್ರನೇ ! ಲೋಕೋತ್ತರಗುಣಸಂಪನ್ನರಾದ ಸುಪುತ್ರರನ್ನು ಪಡೆದು, ಸುಕೃತಶಾಲಿಯೆನ್ನಿಸಿರುವ ನಿನ್ನನ್ನು ನೋಡಬೇಕೆಂದು ಬಂದೆನು. ಇಕ್ಷ್ವಾಕುವಂಶದ ಅರಸರೆಲ್ಲರೂ ದುಷ್ಟನಿಗ್ರಹ, ಶಿಷ್ಟಸಂರಕ್ಷಣ, ಆಶ್ರಿತಪರಿಪಾಲನ, ಗೋಬ್ರಾಹ್ಮಣ ಹಿತಸಾಧನ ಕಾರ್ಯಗಳಲ್ಲಿ ಅಗ್ರೇಸರರು.

ದಶ :—ಪೂಜ್ಯರೇ ! ಎಲ್ಲವೂ ತಮ್ಮಂತಹ ಮಹಾತ್ಮರ ಅನುಗ್ರಹದಿಂದಾದುದು. ಈಗ ನನ್ನಿಂದಾಗಬೇಕಾದ ಕೆಲಸವೇನಾದರೂ ಇದ್ದರೆ ದಯೆಯಿಟ್ಟು ಕಟ್ಟುಮಾಡಬೇಕು.

ವಿಶ್ವಾ :—ನೃಪೋತ್ತಮ ! ನಿನ್ನ ಒಳಿಯುಲ್ಲಿ ಒಂದು ಕೆಲಸವಾಗತಕ್ಕುದಿರುವುದರಿಂದಲೇ ಬಂದಿರುವೆನು. ಆದರೆ ಅದು ಸಫಲವಾಗುವದೇನೆಂದು ಆಲೋಚಿಸುತ್ತಿರುವೆನು !

ದಶ :—(ಕುತೂಹಲದಿಂದ) ಪೂಜ್ಯರೇ ! ತಾವಿಷ್ಟು ಆಲೋಚಿಸುವುದೇಕೆ ? ನಾನು ಯಾವಾಗಲೂ ಯಾರಿಗೂ ಆಶಾಭಂಗವನ್ನುಂಟುಮಾಡಿದವನಲ್ಲ. ನನ್ನ ಪ್ರಾಣವನ್ನು ಕೂಡ ತೃಣವಾಗಿ ಭಾವಿಸಿ ಭೂಸುರರನ್ನು ಸೇವಿಸುವುದು ನನ್ನ ವ್ರತವು.

ವಿಶ್ವಾ :—ಇರಬಹುದಾದರೂ ಹೇಳಲು ಸಂದೇಹಪಡುವೆನು.

ದಶ :—ಮಹಾತ್ಮರೆ ! ಹೀಗೆ ತಾವು ಸಂದೇಹಪಡಲು ಕಾರಣವೇನು ? ಎಂದಾದರೂ ನನ್ನ ಆಚರಣೆಯಲ್ಲಿ ಕೃತ್ರಿಮವಿರುವುದೆಂದು ತಿಳಿದಿರೇನು ?

ವಿಶ್ವಾ :—ಮಹಾರಾಜ ! ನಿನ್ನ ಆಚರಣೆಯಲ್ಲೇನೂ ನ್ಯೂನತೆಯಿಲ್ಲ. ಆದರೂ, ವಾಗ್ದಾನಮಾಡಿಕೊಟ್ಟಲ್ಲದೆ ಹೇಳಲಾರೆನು. (ಕೈ ನೀಡಿ) ಹುಂ, ಜಾಗ್ರತೆಯಾಗಿ ವಾಗ್ದಾನಮಾಡು !

ದಶ :—|| ತನ್ನಲ್ಲಿಯೇ || ಇವರಾಡುವ ಪೂರ್ವಪೀಠಿಕೆಯನ್ನು ಕೇಳುವಾಗಲೇ ಮನಸ್ಸಿನಲ್ಲಿ ಕಳವಳವು ತೋರುವುದು, ಕಾರಣವೇನೋ ತಿಳಿಯದು.

ವಿಶ್ವಾ :—ಏನೈ ದಶರಥಮಹಾರಾಜನೇ ! ವಾಗ್ದಾನಮಾಡುವಾಗಲೇ ಇಷ್ಟು ಶಂಕೆಯಾದರೆ ?

ದಶರಥ :—|| ತನ್ನಲ್ಲಿ || ಇನ್ನು ನಾನು ಸುಮ್ಮನಿರುವುದು ಯುಕ್ತವಲ್ಲ. ಹೇಗಾದರೂ ಇವರಿಗೆ ವಚನವನ್ನು ಕೊಡುವುದೂ ಅದರಂತೆ ಆಚರಿಸುವುದೂ ನನಗೆ ಈಗ ಕರ್ತವ್ಯವು. || ಪ್ರಕಾಶವಾಗಿ || ಪೂಜ್ಯರೇ ! ತಮ್ಮ ಸಂದೇಹಕ್ಕೆ ಕಾರಣವೇನೆಂದು ವಿಚಾರಮಾಡುತ್ತಿದ್ದೆನಷ್ಟೆ ! ಇದೋ ತ್ರಿಕರಣಸಾಕ್ಷಿಯಾಗಿ ವಾಗ್ದಾನಮಾಡುವೆನು. ತಾವು ಹೇಳುವ ಕಾರ್ಯವು ಎಷ್ಟೇ ಕಷ್ಟವಾಗಿದ್ದರೂ ಹಿಂದೆಗೆಯದೆ ಮಾಡುವೆನಲ್ಲದೆ ಎರಡಾಡುವನಲ್ಲ. ಇಕ್ಷ್ವಾಕುವಂಶದವರು ಯಾರೂ ಅನೃತವಾಡುವುದನ್ನೂ ವಂಚಕತನವನ್ನೂ ಅರಿಯರೆಂಬುದು ತಮ್ಮ ಚಿತ್ತಕ್ಕೆ ದೃಢವಾಗಿರಲಿ. ಇದು ನಿಜವಾದ ಮಾತು. [ಅ. ೧೧]

ಇನ್ನಾದರೂ ದಯೆಯಿಟ್ಟು ಹೇಳಬೇಕು.

ವಿಶ್ವಾ :—|| ತನ್ನಲ್ಲಿಯೇ || ಸಾಧು ! ಈತನ ವಿನಯಗುಣವು ಅತ್ಯಂತ ಶ್ಲಾಘ್ಯವಾದುದು. ಇನ್ನು ನನ್ನ ಅಭೀಷ್ಟಸಿದ್ಧಿಯಾದಂತೆ

ಯೇಸರಿ. ||ಪ್ರಕಾಶವಾಗಿ|| ದಶರಥಮಹಾರಾಜಾ! ನೀನು ಸತ್ಯವ್ರತಿಯೆಂಬುದನ್ನು ನಾನು ಬಲ್ಲೆನು. ನಾನು ಒಂದು ಯಾಗವನ್ನು ಮಾಡಬೇಕಾಗಿರುವುದು. ಅದನ್ನು ಕೆಡಿಸಲು ಕ್ರೂರರಾದ ರಾಕ್ಷಸರು ಕಾದಿರುವರು. ಅವರನ್ನು ನಿಗ್ರಹಿಸಿ, ನನ್ನ ಯಾಗವನ್ನು ಸಾಂಗಗೊಳಿಸುವುದಕ್ಕಾಗಿ ನಿನ್ನ ಸುಪುತ್ರನಾದ ರಾಮನನ್ನು ನನ್ನೊಡನೆ ಕಳುಹಬೇಕು.

ದಶ :—(ಗಾಬರಿಯಾಗಿ) ಏನು! ಏನು! ಮುಖರಕ್ಷಣೆಗೆ ಸುಕುಮಾರನನ್ನು ಕಳುಹಬೇಕೇ? (ಸ್ತಬ್ಧನಾಗುವನು.)

ಸುಮಂತ್ರ :—ಮಹಾರಾಜಾ! ಅಧೈರ್ಯಪಡಬಾರದು. ಸ್ವಸ್ಥಚಿತ್ತನಾಗಬೇಕು.

ದಶ :—(ದೈನ್ಯದಿಂದ ಕೈ ಜೋಡಿಸಿ) ಪೂಜ್ಯರೇ! ನನ್ನಲ್ಲಿ ಅನುಗ್ರಹಮಾಡಿರಿ, ಆಗ್ರಹಿಸಬೇಡಿರಿ; ನಿಷ್ಠುರರಾಗಬೇಡಿರಿ! ದಯೆಯಿಂದ ನನ್ನ ಪ್ರಾರ್ಥನೆಯನ್ನು ಲಾಲಿಸಿ-ಮನ್ನಿಸಿ ಪಾಲಿಸಿರಿ. ನಿಮ್ಮ ಯಾಗಸಂರಕ್ಷಣೆಗಾಗಿ ನಾನೇ ಒಂದು ಅಕ್ಷೋಹಿಣೀ ಸೈನ್ಯದೊಡನೆ ಬಂದು, ಆ ರಾಕ್ಷಸರೆಲ್ಲರನ್ನೂ ನಿಗ್ರಹಿಸಿ, ಆಡಿದಮಾತಿಗೆ ತಪ್ಪದೆ ನಿಮ್ಮ ಉದ್ದೇಶವನ್ನು ಸಫಲಗೊಳಿಸುವೆನು. [ಅ. ೧೨]

ವಿಶ್ವಾ :—(ಮಂದಹಾಸದಿಂದ) ಮಹಾರಾಜಾ! ಆ ಕೆಲಸವು ನಿನ್ನಿಂದ ಸಾಗುವಂತಿಲ್ಲ. ನೀನದನ್ನು ನಿರ್ವಹಿಸಲಾರೆ. ರಾಮಚಂದ್ರನನ್ನು ಕಳುಹು.

ದಶ :—ಮಹಾತ್ಮರೆ! ನನ್ನಿಂದ,-ಹಿಂದೆ, ಎಷ್ಟೋ ರಾಕ್ಷಸರನ್ನು ಇದಿರಿಸಿರುವ-ಯುದ್ಧಕೌಶಲಗಳನ್ನೂ ಶಸ್ತ್ರಾಸ್ತ್ರಪ್ರಯೋಗೋಪಸಂಹಾರಕ್ರಮಗಳನ್ನೂ ತಿಳಿದಿರುವ-ನನ್ನಿಂದ, ನಿರ್ವಹಿಸಲಾರದ ಕಾರ್ಯವು ಕೇವಲ ಸುಕುಮಾರನೂ ೧೨ ವರ್ಷದ ಬಾಲಪ್ರಾಯದ

ತರಳನೂ ಯುದ್ಧರಂಗವನ್ನು ಕಣ್ಣಿನಿಂದಲೂ ಕಾಣದವನೂ ಸಾಂಗವಾಗಿ ಶಸ್ತ್ರಾಸ್ತ್ರಪ್ರಯೋಗ-ಉಪಸಂಹಾರಗಳ ಕ್ರಮವನ್ನು ತಿಳಿಯದವನೂ ಆಗಿರುವ ನನ್ನ ಮಗನು-ರಾಮಚಂದ್ರನು, ಹೇಗೆ ಶಕ್ತನಾದಾನು ? ಇದರಮೇಲೆ ರಾಕ್ಷಸರು ಕ್ರೂರರೂ ಮಾಯಾವಿಗಳೂ ಆಗಿ ದೊಂಬಿಯುದ್ಧವನ್ನು ಮಾಡತಕ್ಕವರು ;

ವಿಶ್ವಾ :—(ಪರಿಹಾಸದಿಂದ ನಕ್ಕು) [ಅ. ೧೩.] ಬಿಡು ಬಿಡು, ಈ ಭ್ರಾಂತಿ ಮೋಹಗಳನ್ನು ಬಿಡು. 'ಈತನು ನನ್ನ ಮಗನು' ಎಂಬೀ ವ್ಯಾಮೋಹವನ್ನೇ ಬಿಟ್ಟುಬಿಡು. ತೇಜಸ್ಸಿನಲ್ಲಿಯೂ ಪರಾಕ್ರಮ, ಸಾಹಸ, ವೀರ್ಯ, ಧೈರ್ಯಗಳಲ್ಲಿಯೂ ಈತನು ಅದ್ವಿತೀಯನಾದ ಪುರುಷೋತ್ತಮನೆಂದು ತಿಳಿ ! ರಾಜೇಂದ್ರ ! ಈತನ ತೇಜಸ್ಸಿನ ಮುಂದೆ ರಾಕ್ಷಸರು ನಿಲ್ಲಲು ಎಂದಿಗೂ ಶಕ್ತರಾಗರು. ನಾನೇ ಆ ರಾಕ್ಷಸರನ್ನು ನಿಗ್ರಹಿಸಬಲ್ಲೆನಾದರೂ ಕೋಪತಾಪಗಳಿಂದ ತಪೋಭಂಗವಾಗುವುದೆಂದು ಬಿಟ್ಟೆನು. ಶಸ್ತ್ರಾಸ್ತ್ರವಿದ್ಯೆಗಳನ್ನೂ ಯುದ್ಧಕೌಶಲವನ್ನೂ ರಾಮನಿಗೆ ನಾನು ತಿಳಿಸುವೆನು. ವಿಳಂಬಿಸದೆ ರಾಮನನ್ನು ಕಳುಹಲು ಸಮ್ಮತಿಸು.

ದಶ :—(ಗದ್ಗದಸ್ವರದಿಂದ) ಮಹಾತ್ಮರೇ ! ಕ್ಷಮಿಸಿರಿ. ಅರವತ್ತುಸಾವಿರ ವರ್ಷಗಳಮೇಲೆ ಬಹುಕಷ್ಟಪಟ್ಟು ಪಡೆದಿರುವ ಸುಕುಮಾರನನ್ನು-ವಂಶವಿವರ್ಧನನೂ ಸುಗುಣಾರಾಮನೂ ನನ್ನ ಪ್ರಾಣಾಧಿಕ ಪ್ರಿಯತಮನೂ ಧಾರ್ಮಿಕಾಗ್ರೇಸರನೂ ಸುಕುಮಾರಾಂಗನೂ ಆದ ರಾಮನನ್ನು, ಬಿಟ್ಟು, ನಾನು ಅರೆಗಳಿಗೆಯೂ ಜೀವಿಸಲಾರೆನು !

ವಿಶ್ವಾ :—(ನಸುನಗೆಯಿಂದ) ಎಲೈ ರಾಜನೇ ನಿನಗಿಷ್ಟು ಅಧೈರ್ಯವೇಕೆ ?

ದಶ :—ಮಹಾತ್ಮರೇ ! ಆ ರಾಕ್ಷಸರು ಯಾರು ? ಯಾರ ಕಡೆಯವರು ? ಅವರ ಹೆಸರೇನು ? ಮಾಯಾವಿಗಳಾದ ಅವರೊಡನೆ ಯುದ್ಧಮಾಡುವ ಕ್ರಮವಾವುದು ? ಇದಾವುದೂ ತಿಳಿಯದೆ ಬಾಲನನ್ನು ಕಳುಹುವುದೆಂತು ?

ವಿಶ್ವಾ :— ದಶರಥನೇ, ಪೌಲಸ್ತ್ಯನ ಮಗನೂ ಕುಬೇರನ ತಮ್ಮನೂ ಹರಬ್ರಹ್ಮರವರದಿಂದ ಅಜೇಯನೂ ಮಹಾಪರಾಕ್ರಮಿಯೂ ಆದ ರಾವಣನ ಹೆಸರನ್ನು ಕೇಳಿಬಲ್ಲೆಯಷ್ಟೆ ? ಆತನೂ ಆತನ ಕಡೆಯವರೂ ಗೋಬ್ರಾಹ್ಮಣರನ್ನು ಹಿಂಸಿಸುತ್ತಲೂ ಯಜ್ಞಯಾಗಂಗಳನ್ನು ಕೆಡಿಸುತ್ತಲೂ ಇರುವರು ರಾವಣನಕಡೆಯವರಾದ ಮಾರೀಚಸುಬಾಹುಗಳೆಂಬ ರಾಕ್ಷಸರೂ ಸಪರಿವಾರರಾಗಿ ನನ್ನ ಯಾಗವನ್ನು ಕೆಡಿಸುತ್ತಿರುವರು. ಅವರನ್ನು ವಧಿಸಲು ನಿನ್ನಿಂದಲಾಗಲೀ ಮತ್ತಾರಿಂದಲೇ ಆಗಲಿ ಸಾಧ್ಯವಿಲ್ಲ. ರಾಮನನ್ನು ಕಳುಹು.

ದಶ—(ಕಳವಳದಿಂದ) ಪೂಜ್ಯರೇ ! ಕ್ಷಮಿಸಿರಿ. ಮೂರು ಲೋಕಂಗಳಲ್ಲಿರುವರೆಲ್ಲರೂ ಒಟ್ಟಾಗಿ ನಿಂತರೂ ರಾವಣನ ವೇಗವನ್ನು ತಡೆಯಲಾರರು. ಭಯಂಕರರಾದ ಮಾರೀಚ ಸುಬಾಹುಗಳನ್ನು ನಿಗ್ರಹಿಸಲು ನಾಲ್ವರು ಮಕ್ಕಳೊಡನೆ ಕೂಡಿದ ನಾನೂ ಸಮರ್ಥನಾಗಲಾರೆನು. ಕೃಪೆಯಿಂದ ಕುಮಾರನನ್ನು ಕರೆದೊಯ್ಯಬೇಡಿರಿ.

ವಿಶ್ವಾ :—(ನಕ್ಕು) [ಆ. ೧೪.] ಎಲೈ ಅರಸನೇ ! ಭ್ರಾಂತನಾದ ನೀನು ನಿಜತತ್ವವನ್ನರಿಯಲಾರೆ ! ಶ್ರೀರಾಮನು ಯಾರು ಆತನ ವೀರ್ಯವೆಂತಹದು—ಆತನ—ಮಹಿಮೆಯೆಷ್ಟು—ಎಂಬಿವನ್ನು ನಾನು ಚನ್ನಾಗಿ ಬಲ್ಲೆನು. ರಕ್ಕಸಾರಿಯಾದ ರಮೇಶನೇ ಆತನೆಂದು ತಿಳಿದು ಪುತ್ರನೆಂಬ ಭ್ರಾಂತವಾದವನ್ನು ದೂರಮಾಡು. ನನ್ನ ಮಾತಿನಲ್ಲಿ ನಿನಗೆ ನಂಬುಗೆಯಿಲ್ಲವಾದರೆ, ನಿನ್ನ ಕುಲಗುರುವೂ, ನನಗೆ ಬ್ರಾಹ್ಮಣ್ಯವನ್ನಿತ್ತ ಮಹಾ ತೇಜಸ್ವಿಯೂ ಮಹಾನುಭಾವನೂ ತತ್ತ್ವವೇತ್ತನೂ

ಆದ ಈ ವಸಿಷ್ಠನನ್ನು ಕೇಳಿ, ತಿಳಿದುಕೊ; ಇನ್ನೂ ನಿನ್ನ ಬಳಿಯಲ್ಲಿ ರುವ, ತತ್ವವಿದರಾದ ಈ ವಾಮದೇವಾದಿ ಮಹರ್ಷಿಗಳನ್ನೂ ಕೇಳಿ, ತಿಳಿದುಕೋ!

ದಶರಥ:—(ದೈನ್ಯದಿಂದ) [ಅ. ೧೫.] ಪೂಜ್ಯರೆ! ಪ್ರಸನ್ನ ರಾಗಬೇಕು! ತಾವು ಎಷ್ಟುಪರಿಯಿಂದ ತಿಳಿಯಹೇಳಿದರೂ ನನ್ನ ಮನಸ್ಸಿನ ಭೀತಿ, ತಪ್ಪದು! ಸರ್ವಾತ್ಮನಾ, ನಿಮಿಷಾರ್ಧವಾದರೂ-ನಾನು, ಪುತ್ರವಿರಹವನ್ನು ಸಹಿಸಲಾರೆನು!

ವಿಶ್ವಾ:—(ಕೋಪದಿಂದ) ಎಲೈ, ದಶರಥರಾಯನೆ! ನೀನು ಪುತ್ರವ್ಯಾಮೋಹದಿಂದ ಉಚಿತಾನುಚಿತವನ್ನು ತಿಳಿಯಲಾರದೆ, ವಚನ ಭಂಗದೋಷಕ್ಕೂ ಹಿಂದೆಗೆಯದೆ, ಹೀಗೆನ್ನುವೆಯಲ್ಲವೆ? ಆಗಲಿ; ಆ ಪರಮಾತ್ಮನ ಕೃಪೆಯಿಂದ, ನನ್ನ ಕ್ರತುವನ್ನು ಸಾಂಗಗೊಳಿಸುವ ಮಹಾತ್ಮರು ಯಾರಾದರೂ ದೊರೆಯಬಹುದು! ಆದರೆ, ಇಕ್ಷ್ವಾಕು ಕುಲದಲ್ಲಿ-ರಘುವಂಶದಲ್ಲಿ, ಹುಟ್ಟಿದ ದಶರಥನು, ಕೊಟ್ಟಭಾಷೆಗೆ ತಪ್ಪಿದ ನೆಂಬ ಯಶಸ್ಸು ಮಾತ್ರ ಎಂದಿಗೂ ತಪ್ಪುವುದಿಲ್ಲ! ನಿನಗೆ ಶುಭವಾಗಲಿ, ಪುತ್ರರನ್ನು ಬಳಿಯಲ್ಲಿಯೇ ನಿಲ್ಲಿಸಿಕೊಂಡು ಸುಖಿಸು. ನಾವಿನ್ನು ಹೊರಡುವೆನು. (ಹೊರಡುವನು.)

ವಸಿಷ್ಠ:—|| ಸ್ವಗತಂ || ಪ್ರಚಂಡಶಾಸನನಾದ ಈ ಚಂಡಕೌಶಿಕನು, ಕುಪಿತನಾಗಿ ಹೊರಟುಹೋದರೆ, ರಾಜನಿಗೆ ಕ್ಷೇಮವಾಗುವುದಿಲ್ಲ. ನಾನೀವೇಳೆಯಲ್ಲಿ ಸುಮ್ಮನಿರಬಾರದು. || ಪ್ರಕಾಶಂ || ಎಲೈ ವಿಶ್ವಾಮಿತ್ರರೆ! ಹೀಗೆ ಆಗ್ರಹಗೊಳ್ಳಬಾರದು. ಬಂದು ಸ್ವಲ್ಪ ವಿಶ್ರಮಿಸಿಕೊಳ್ಳಿರಿ; ಮಹಾರಾಜನು ಸುಕುಮಾರನನ್ನು ಕಳುಹಿಸುವನು!

ವಿಶ್ವಾ:—(ತಡೆದುನಿಂತು) ಆರ್ಯ! ನಿಮ್ಮ ವಾಕ್ಯವನ್ನು ಮೀರಲಾರೆನು. ಆದರೆ, ತ್ವರೆಪಡಿಸಿರಿ.

ವಸಿಷ್ಠ :—(ದಶರಥನಕಡೆಗೆ ತಿರುಗಿ) ಎಲೈ, ಮಹಾರಾಜನೆ! ನಿನಗಿನ್ನು, ಭ್ರಮೆಯು, ಸಲ್ಲದು! ಶ್ರೀರಾಮನು ಅಪ್ರಾಕೃತನೂ ಅದ್ವಿತೀಯನೂ ಅನಘನೂ ಅವ್ಯಯನೂ ಆದ ಪುರುಷೋತ್ತಮನು! ವಿಶ್ವಾಮಿತ್ರನ ತೇಜಸ್ಸಿನಿಂದಲೇ ಆ ರಕ್ಕಸರು ಹತವೀರ್ಯರಾಗಿದ್ದಾರೆ ಆದರೂ ನಿನ್ನ ಕುಮಾರನ ಶ್ರೇಯಸ್ಸಿಗಾಗಿ ಈತನೊಡನೆ ನಿನ್ನಕುಮಾರ ನನ್ನು ಕಳುಹಿಸು. ಶ್ರೀರಾಮನ ಮಹಿಮಾತಿಶಯಪ್ರಕಟನೆಗೆ ಸಮಯ.ವಿದೇ!

ದಶರಥ:—(ಸಮಾಧಾನದಿಂದೆದ್ದು ಕೈಜೋಡಿಸಿ) ಗುರೂಪದೇಶ ದಿಂದ ಭ್ರಮನಿರಸನವಾಗಿ ಅನುಗೃಹೀತನಾದೆನು. (ಸುಮಂತ್ರನಕಡೆಗೆ ತಿರುಗಿ ಅಮಾತ್ಯವರ್ಯ! ಜಾಗ್ರತೆಯಾಗಿ ಸುಕುಮಾರರನ್ನು ಬರಮಾಡು.

(ಸುಮಂತ್ರನು ಹೋಗುವನು.)

ದಶರಥ :—(ವಿಶ್ವಾಮಿತ್ರನನ್ನು ಕುರಿತು) ಪೂಜ್ಯರೇ! ಅಪರಾಧವನ್ನು ಕ್ಷಮಿಸಿ, ಅನುಗ್ರಹಿಸಿ. ಸುಕುಮಾರರು ಬರುವವರೆಗೆ ವಿಶ್ರಮಿಸಿಕೊಳ್ಳಬೇಕು.

ವಿಶ್ವಾ :—||ಸ್ವಗತಂ|| ಸಾಧು! ಈ ಮಹಾರಾಜನ ವಿವೇಕವು ಈಗಲೀಗ ಸಾಧುವೆನಿಸತಕ್ಕುದು! || ಪ್ರಕಾಶಂ || ಸಂತೋಷ, (ಬಂದು ಆಸನದಮೇಲೆ ಕುಳಿತುಕೊಳ್ಳುವನು)

(ಸುಮಂತ್ರನು ರಾಮಲಕ್ಷ್ಮಣರನ್ನು ಕರೆದುಕೊಂಡುಬರುವನು. ರಾಮ ಲಕ್ಷ್ಮಣರು ದಶರಥನಬಳಿಗೆ ಗಂಭೀರವಾಗಿ ನಡೆದುಬರುವರು.)

ವಿಶ್ವಾಮಿತ್ರ :—(ಎದ್ದುನಿಂತು ಕೌತುಕದಿಂದ) ಆಹಾ! ಎಂತಹ ಸೌಂದರ್ಯ! ಏನು ಗಾಂಭೀರ್ಯ!! ಅದೆಷ್ಟು ಮಾಧುರ್ಯ! ಇಂತಹ ನೇತ್ರಾನಂದಕರನೂ ಲೋಕಾಭಿರಾಮನೂ. ಯೋಗೀಜನ ಹೃದಯಾರಾಮನೂ ಆದ ಈ ರಾಮಚಂದ್ರನನ್ನು ಅನವರತವೂ ನೋಡಿ

ನೋಡಿ ನಲಿಯುತ್ತಿರುವ ಕೌಸಲ್ಯಾ ದಶರಥಾದಿಗಳ ಸುಕೃತವೇ ಸುಕೃತವು! ಲೀಲಾ ಮಾನುಷವಿಗ್ರಹನಾದ ಈ ಪುರುಷೋತ್ತಮನು, ಕೇವಲ ಪ್ರಾಕೃತಮಾನವನಂತೆ ಅದೆಷ್ಟು ನಯ ವಿನಯಗಳಿಂದ ತಂದೆಯ ಬಳಿಗೆ ಬರುತ್ತಿರುವನು! ಈತನನ್ನೇ ಅನುಸರಿಸಿ ಬರುತ್ತಿರುವ ಈ ಲಕ್ಷ್ಮಣನ ಸೌಕುಮಾರ್ಯ ಗಾಂಭೀರ್ಯಗಳಾದರೂ ಎಷ್ಟಿರುವುವು! [ಅ. ೧೬.]

ರಾಮ
ಲಕ್ಷ್ಮಣ } :—(ದಶರಥನಬಳಿಗೆ ಬಂದು ಕೈಜೋಡಿಸಿ ತಿರಬಾಗಿ) ಪೂಜ್ಯನಾದ ಜನಕನಿಗೂ ಗುರುಗಳಿಗೂ ನಮಸ್ಕರಿಸುವೆವು.

ವಸಿಷ್ಠ :—ಶ್ರೇಯೋಭಿವೃದ್ಧಿಯಾಗಲಿ

ದಶರಥ :—(ರಾಮನನ್ನು ಬಲದೋಳಿನಿಂದಲೂ ಲಕ್ಷ್ಮಣನನ್ನು ಎಡದೋಳಿನಿಂದಲೂ ಬಿಗಿದಪ್ಪಿ ಮುಂದಲೆಯನ್ನು ಮೂಸಿ) ಸುಕುಮಾರರೆ! ನಿಮ್ಮಲ್ಲಿ ಅನುಗ್ರಹಬುದ್ಧಿಯುಳ್ಳವರಾಗಿ ಚಿತ್ತೈಸಿರುವ ಪೂಜ್ಯರಾದ ಈ ವಿಶ್ವಾಮಿತ್ರರಿಗೆ ನಮಸ್ಕರಿಸಿರಿ.

ರಾಮ
ಲಕ್ಷ್ಮಣ } :—(ವಿಶ್ವಾಮಿತ್ರನ ಬಳಿಗೆ ಬಂದು) ಪೂಜ್ಯರಿಗೆ ನಮಸ್ಕರಿಸುವೆವು

ವಿಶ್ವಾ :—(ಎರಡು ಕೈಗಳನ್ನೂ ಮೇಲಕ್ಕೆತ್ತಿ) ಸಕಲಶ್ರೇಯಸ್ಸುಗಳೂ ಉಂಟಾಗಲಿ! ರಘುವಂಶವು ನಿಮ್ಮಿಂದ ಚಿರಕಾಲ ವಿರಾಜಮಾನವಾಗಿ ವಿಖ್ಯಾತವಾಗಲಿ.

ದಶರಥ :—(ಮುಂದೆಬಂದು ರಾಮನಕೈಹಿಡಿದು) ಎಲೈ ಸುಕುಮಾರನೇ! ಈ ಮಹಾತ್ಮರು ನಿನ್ನನ್ನು ಕರೆದೊಯ್ಯಲು ಬಂದಿರುವರು. ನೀನಿವರೊಡನೈದಿ, ಇವರ ಅನುಜ್ಞೆಯನ್ನು ಪಾಲಿಸಿ, ಇವರಿಂದ ಸಕಲ ವಿಧ ಶ್ರೇಯಸ್ಸುಗಳನ್ನೂ ಪಡೆದು ಬರುವವನಾಗು! [ಅ. ೧೭.]

ರಾಮ :—ಶಿರಸಾವಹಿಸಿ ನಡೆಯುತ್ತೇನೆ

ದಶರಥ: —(ವಿಶ್ವಾಮಿತ್ರನ ಹಸ್ತದಲ್ಲಿ ರಾಮನ ಕೈಯನ್ನಿರಿಸಿ) ಪೂಜ್ಯರೇ ! ಸುಕುಮಾರನಾದ ರಾಮನನ್ನು ತಮ್ಮ ವಶಕ್ಕೊಪ್ಪಿಸಿರುವೆನು. ದಯಾಘನರಾದ ತಮ್ಮಲ್ಲಿ ನಾನು ವಿಶೇಷ ವಿಜ್ಞಾಪಿಸಬೇಕಾದುದಿಲ್ಲ. ಆದರೂ ನನ್ನ ಅಭಿಮಾನಕ್ಕಾಗಿ, ತಮ್ಮ ಪುತ್ರನೆಂದಿವನನ್ನು ಪಾಲಿಸಬೇಕೆಂದು ಪ್ರಾರ್ಥಿಸುತ್ತೇನೆ. ಅನುಗ್ರಹಿಸಬೇಕು !

[ಅ. ೧೮]

ವಿಶ್ವಾ :—ಎಲೈ ಸುಕೃತಶಾಲಿಯಾದ ಮಹಾರಾಜನೆ ! ನೀನು ನಿಶ್ಚಿಂತನಾಗಿರು. ಸಕಲ ಶ್ರೇಯಸ್ಸುಗಳನ್ನೂ ಪಡೆದ ಸುಕುಮಾರನನ್ನು ಜಾಗ್ರತೆಯಾಗಿಯೇ ಕರೆದುಕೊಂಡುಬಂದು ನಿನ್ನ ಬಳಿಯಲ್ಲಿ ಬಿಡುವೆನು.

ಲಕ್ಷ್ಮಣ :—(ದಶರಥನಿಗೆ ನಮಸ್ಕರಿಸಿ ಕೈಜೋಡಿಸಿ ನಿಂತು) ಪೂಜ್ಯ ಜನಕನೇ ! ಅಣ್ಣನಾದ ರಾಮಭದ್ರನನ್ನು ಬಿಟ್ಟು ನಾನಿಲ್ಲಿ ಅರೆಗಳಿಗೆಯೂ ಇರಲಾರೆನು. ನನಗೂ ಅಪ್ಪಣೆಯನ್ನಿತ್ತು ಕಳುಹು. ನಾನೂ ಅಣ್ಣನಿಗೆ ನೆಳಲಿನಂತಿದ್ದು ಬರುವೆನು. [ಅ ೧೯.]

ದಶರಥ :—(ಲಕ್ಷ್ಮಣನನ್ನು ಬಿಗಿದಪ್ಪಿ ಮುದ್ದಿಸುವನು.)

ವಸಿಷ್ಠ :—|| ಸ್ವಗತಂ || ಆದಿಪುರುಷನು ಹಾಸಿಗೆಯಾದ ಶೇಷನನ್ನು ಬಿಟ್ಟಿರಲಾಪನೇ !

||ಪ್ರಕಾಶಂ|| ಮಹಾರಾಜನೇ ! ಸೂರ್ಯನನ್ನೇ ಆಶ್ರಯಿಸಿರುವ ಕಿರಣವು ಬೇರೆಯಾಗಿರುವುದೇ ? ರಾಮಚಂದ್ರನೊಡನೆ ಲಕ್ಷ್ಮಣಕುಮಾರನನ್ನೂ ಕಳುಹಿಸು.

ಸುಮಂತ್ರ :—ಅದೇ ಸರಿಯಾದ ಮಾತು. ಅವರಿಬ್ಬರೂ ಅಗಲಿರತಕ್ಕವರಲ್ಲ.

ವಿಶ್ವಾ :—ಮಹಾರಾಜನೇ! ಲಕ್ಷ್ಮಣನ ಕುತೂಹಲವೂ ಉತ್ಸಾಹವೂ ನನಗೆ ಅತ್ಯಂತ ತೃಪ್ತಿಕರವಾಗಿದೆ. ಅಣ್ಣನೊಡನೆ ಆತನೂ ಬರಲಿ!

ದಶರಥ :—(ಲಕ್ಷ್ಮಣನ ಕರವನ್ನು ರಾಮನ ಕೈಯ್ಯಲ್ಲಿರಿಸಿ ರಾಮನ, ಭುಜದಮೇಲೆ ತನ್ನೆಡದ ಕೈಯ್ಯನ್ನಿರಿಸಿ) ಸುಕುಮಾರ! ನಿನ್ನ ತಮ್ಮನಾದ ಲಕ್ಷ್ಮಣನನ್ನು ನಿನ್ನ ವಶಕ್ಕೊಪ್ಪಿಸಿರುವೆನು. ನೀವಿಬ್ಬರೂ ಈ ಪೂಜ್ಯರ ಆಜ್ಞೆಗೆ ವಿಧೇಯರಾಗಿದ್ದು-ಇವರನ್ನು ನನ್ನಂತೆಯೇ ಭಾವಿಸಿ, ಸೇವಿಸಿ, ಕೃತಾರ್ಥರಾಗಿ ಬನ್ನಿರಿ.

ರಾಮ :—(ಲಕ್ಷ್ಮಣನನ್ನು ಆಲಿಂಗಿಸಿ ಸಡಗರದಿಂದ) ಪ್ರಿಯ ಸಹೋದರ! ನಾನು ನಿನ್ನನ್ನಗಲಿರುವೆನೆಂದಿದ್ದೆಯೋ? ನಾವಿಬ್ಬರೂ ಕೂಡಿ ಪೋಗಿ ಪೂಜ್ಯರನ್ನು ಸೇವಿಸಿ ಕೃತಕೃತ್ಯರಾಗಿ ಬರುವ, ಬಾ.

ಕಂಚುಕಿ ಪ್ರವೇಶಿಸಿ :—ಮಹಾರಾಜನಿಗೆ ಮಂಗಳವಾಗಲಿ. "ಪೂಜ್ಯರಾದ ವಿಶ್ವಾಮಿತ್ರರು ಮಾಧ್ಯಾಹ್ನಿಕವನ್ನು ನೆರವೇರಿಸಿ ಆತಿಥ್ಯವನ್ನು ಸ್ವೀಕರಿಸಿ ತಮ್ಮೆಲ್ಲರನ್ನೂ ಅನುಗ್ರಹಿಸಿ ಆ ಬಳಿಕ ಪ್ರಯಾಣಮಾಡಬೇಕೆಂದೂ, ಗುರುಜನರೊಡನೆ ಹೊರಟಿರುವ ಸುಕುಮಾರರಿಗೆ ತಾವೂ ಸೇಸೆಯಿಕ್ಕಿ ಕಳುಹುವ ಕುತೂಹಲವಿದೆಯೆಂದೂ ಕೌಸಲ್ಯಾದೇವಿಯವರು ವಿಜ್ಞಾಪಿಸುತ್ತಿರುವರು"

ತೆರೆಯಲ್ಲಿ :—ಭೇರೀತಾಡನವಾಗುವುದು.

ಸುಮಂತ್ರ :—(ಮೇಲೆನೋಡಿ ಎದ್ದುನಿಂತು) ಮಹಾರಾಜನೆ! ದುಷ್ಟನಿಗ್ರಹ ಪೂರ್ವಕವಾದ ಶಿಷ್ಟಪರಿಪಾಲನವ್ರತವನ್ನು ಕೈಗೊಂಡಿರುವ ಶ್ರೀರಾಮಚಂದ್ರನ ತೇಜೋ ಬಲ ಪರಾಕ್ರಮಗಳನ್ನು ನೋಡಿದ ನಿಮ್ಮ ಮೂಲಪುರುಷನಾದ ದೀನನಾಥನು ಇದೋ ಮಧ್ಯಾಗಸದಲ್ಲಿ ನಿಂತು ಹೇಗೆ ಪ್ರಜ್ವಲಿಸುತ್ತಿರುವನು, ನೋಡು. [ಅ. ೨೦.]

ದಶರಥ :—ಕೈಜೋಡಿಸಿನಿಂತು, ಪೂಜ್ಯರಾದ ವಿಶ್ವಾಮಿತ್ರರೆ! ಕುಲಪುರೋಹಿತರಾದ ಗುರುಜನರೇ! ತಾವೆಲ್ಲರೂ ಬಂದು ದೇವಿಯರ ಅಭಿಲಾಷೆಯನ್ನು ನಡೆಯಿಸಿಕೊಟ್ಟು ಆ ಬಳಿಕ ಪ್ರಯಾಣ ಬೆಳಸಬೇಕೆಂದು ಪ್ರಾರ್ಥಿಸುತ್ತೇನೆ.

ವಿಶ್ವಾಮಿತ್ರ
ವಸಿಷ್ಠ } :—ಹಾಗೆಯೇ ಆಗಲಿ (ಎಲ್ಲರೂ ಹೋಗುವರು.)

ಇಂತು ಪ್ರಥಮಾಂಕಂ



|| ಶ್ರೀಃ ||

# ದ್ವಿತೀಯಾಂಕಂ

(ಕಾನನಪ್ರಾಂತದಲ್ಲಿ ವಿಕಟಾಟ್ಟಹಾಸಮಾಡುತ್ತ ತಾಟಕಿಯು ಪ್ರವೇಶ)

ತಾಟಕಿ :—ಹೀಹೀ! ಆನಂದಪಾನಂದವು! ನಾನಾದರೋ ನರಮಾಂಸವನ್ನು ತಿಂದು ಎಷ್ಟೋ ದಿವಸಗಳಾದುವೆಂದು ಕೊರಗುತ್ತಿದ್ದೆನು. ಈಗ ನನಗೆ ಇಷ್ಟಾರ್ಥಸಿದ್ಧಿಯಾಗುವ ಕಾಲವು ಪ್ರಾಪ್ತವಾಯ್ತು. ಹಾಹಹಾ! ಭಲೆ! ನನ್ನ ಸಂತೋಷವನ್ನು ನನ್ನ ಮಗನಿಗೂ ತಮ್ಮನಿಗೂ ತಿಳಿಸುತ್ತೇನೆ. ಓ ಓ ಮಗನೇ-ಮಾರೀಚನೇ, ಬಾ-ಬಾ. ಬೇಗಬಾ. ಲೇ ತಮ್ಮಾ ಸುಬಾಹು-ಓಡಿಬಾ. ಓಡಿಬಾ. [ಅ. ೧]

|| ತೆರೆಯಲ್ಲಿ || ಬಂದೆ ಬಂದೆ, ಬಂದೆ ಬಂದೆ.

(ಭಯಂಕರರಾದ ಮಾರೀಚ ಸುಬಾಹುಗಳ ಪ್ರವೇಶ)

ತಾಟಕಿ:—(ಪುಟಹಾರಿ ಕುಣಿದುನಿಂತು ಕೈಗಳನ್ನು ತಿರುಗಿಸುತ್ತ, ಹೀಹೀ! ಬಾಬಾ! ಬನ್ನಿರಿ. ಈದಿನ ನಮಗೆ ದೊಡ್ಡಹಬ್ಬ; ಔತನ! ಒಳ್ಳೆ ರುಚಿ ರುಚಿಯಾದ ಆಹಾರ!

ಮಾರೀಚ :—ಅದೇನದೇನು? ಅಮ್ಮ, ಎಲ್ಲಿಯ ಔತನ?

ತಾಟಕಿ :—ಎಲ್ಲಿ, ಗೊತ್ತಿಲ್ಲವೆ? ಇದೇಕಾನನದಲ್ಲಿ! ಏನು? ಕೊಬ್ಬಿದ ರಾಜಪುತ್ರರಿಬ್ಬರು! ಮತ್ತು.

ಸುಬಾಹು :—ಹಾಹಹಾ! ಅದೇನು, ಬೇಗಬೇಗ ತಡೆಯದೆ ಹೇಳಿಬಿಡು! ನಾಲಿಗೆಯಲ್ಲಿ ನೀರಾಡುತ್ತಿದೆ,

ತಾಟಕಿ :—[ಅ. ೨.] ತಮ್ಮಾ, ನಮ್ಮ ಧಣಿ, ನಮ್ಮ ರಾಕ್ಷಸೇಂದ್ರ- ಆ ರಾವಣೇಶ್ವರ!

ಮಾರೀಚ
ಸುಬಾಹು } :—ಓ ಓ ಒಲ್ಲೆವು-ಒಲ್ಲೆವು! ನಮ್ಮ ಧಣಿ, ರಾಕ್ಷಸೇಂದ್ರ, ದಶಕಂಠ-ರಾವಣೇಶ್ವರನೆಂದು ಚನ್ನಾಗಿ ಬಲ್ಲೆವು.

ತಾಟಕಿ:—ಆ ನಮ್ಮ ರಾಕ್ಷಸೇಂದ್ರನು, ನಮಗೇನು ಕಟ್ಟುಮಾಡಿದ್ದಾನೆ, ಗೊತ್ತುಂಟೋ? ಯಜ್ಞಗಳನ್ನೆಲ್ಲಾ ಕೆಡಿಸಿರೆಂದು,-ಗೋಬ್ರಾಹ್ಮಣರನ್ನು ಹಿಂಸಿಸಿ- ಭಕ್ಷಿಸಿರೆಂದು! [ಅ. ಹ.]

ಮಾರೀಚ
ಸುಬಾಹು } :—ನಿಜ ನಿಜ, ಹಾಗೆಯೇ ಮಾಡುತ್ತೇವಲ್ಲ, ಹೇಳು-ಈಗೆಲ್ಲಿಗೆ ಹೋಗಬೇಕು?

ತಾಟಕಿ :—ಈಗ ಧೂರ್ತನಾದ ಆ ಚಂಡಕೌಶಿಕನು ಯಾಗಕ್ಕೆ ಪ್ರಾರಂಭಿಸಿದ್ದಾನೆ. ಯಾಗ ಸಂರಕ್ಷಣೆಗಾಗಿಯೂ ನಮ್ಮ ಹಿಂಸೆಯನ್ನು ತಪ್ಪಿಸಲಿಕ್ಕಾಗಿಯೂ ಯಾರೋ ದಶರಥನಂತೆ, ಅವನಲ್ಲಿ ಹೇಳಿಕೊಂಡನಂತೆ! ಆ ದಶರಥನ ಮಕ್ಕಳಿಬ್ಬರನ್ನು ಸಹಾಯಕ್ಕೆ ಕರತರುತ್ತಾನಂತೆ! ಉಹೂಹೂ-ಮುಂದೇನು ಮಾಡುವುದು ಗೊತ್ತೋ? [ಅ. ಹ.]

ಮಾರೀಚ
ಸುಬಾಹು } :—(ಮೇಲಕ್ಕೆ ಹಾರಿ ಸೆಲದ ಮೇಲೆ ದಟ್ಟಿಸನಿಂತು) ಓ ಓ ಗೊತ್ತಾಯ್ತು (ಕೈಗಳನ್ನು ಮುದುಡಿ ಬಾಯೊಳಗೆ ತುರುಕಿಕೊಳ್ಳುವಂತೆ ಮಾಡಿತೋರಿಸುವರು.)

ತಾಟಕಿ:—ಆಂ ಆಂ; ಅದೇ ಅದೇ! ತಿಳಿಯಿತೋ! ಈಗ ಅವರು ದಾರಿಯಲ್ಲಿಯೇ ಬರುತ್ತಲಿದ್ದಾರೆ. ನಾವಿಲ್ಲಿ ಕಾದಿದ್ದು ಅವರನ್ನು (ಎರಡು ಕೈಗಳನ್ನೂ ಜೋಡಿಸಿ ಮೇಲಕ್ಕೆತ್ತಿ ಜೋರಿನಿಂದ ಕೈಗಳನ್ನು ಬೇರೆ ಬೇರೆ ಎಳೆದು) ಪೂರೈಸಿಬಿಡಬೇಕು!

ಸುಬಾಹು :—ಹೋ ! ಅದೇನು ದೊಡ್ಡ ಕೆಲಸ ? ನೀನೊಬ್ಬಳೇ ಅವರನ್ನು ನಿಮಿಷಮಾತ್ರದಲ್ಲಿ ಪೂರೈಸಿಬಿಡಬಲ್ಲೆ ? ನಾವು ಮಾಡು ವುದೇನು ?

ತಾಟಕಿ :—ನಾನು ಆ ಮೂವರನ್ನೂ ವಿಚಾರಿಸಿಕೊಳ್ಳುತ್ತೇನೆ. ನೀವಿಬ್ಬರೂ ಪರಿವಾರದೊಡನೆ ಹೋಗಿ ಆ ಕೌಶಿಕನ ಆಶ್ರಮದಲ್ಲಿ ಸೇರುವ ಋಷಿಗಳನ್ನೆಲ್ಲ ಒಟ್ಟಿಗೆ ಧ್ವಂಸಮಾಡಿಬಿಡಬೇಕು. ಹುಂ, ಹೊರಡಿರಿ, ಆದರೆ, ಜಾಗರೂಕರಾಗಿರಬೇಕು.

ಮಾರೀಚ
ಸುಬಾಹು } :—ಗಳು ತಲೆದೂಗುತ್ತ ಹೋಗುವರು.

ತಾಟಕಿ :—ಸರಿ, ನಾನಿನ್ನು ಇಲ್ಲಿ ನಿಂತೇಕೆ ಅವರ ದಾರಿನೋ ಡುತ್ತಿರಲಿ ! ಇದಿರಾಗಿಯೇ ಹೋಗಿ ಮೇಲೆಬಿದ್ದು, ನನ್ನ ಕೈಗುಣವನ್ನು ಆ ಕೌಶಿಕನಿಗೆ ತೋರಿಸುವೆನು.

(ವಿಕಾರವಾಗಿ ಕೇಕೆಹಾಕಿ ನಗುತ್ತ ಹೋಗುವಳು.)

## ವನಪ್ರಾಂತದಲ್ಲಿ ಧನುರ್ಧರರಾದ ರಾಮ ಲಕ್ಷ್ಮಣರೊಡನೆ ವಿಶ್ವಾಮಿತ್ರನ ಪ್ರವೇಶ.

---

ವಿಶ್ವಾ :—(ರಾಮನ ಕಡೆಗೆ ಕೈಯೆತ್ತಿ) ಸುಕುಮಾರನಾದ ಶ್ರೀ ರಾಮನೇ ! ಸಾನುಜನಾದ ನಿನಗೆ ಸುಪ್ರಭಾತವಷ್ಟೆ? ರಾತ್ರಿ, ಸುಖ ನಿದ್ರೆ ಮಾಡಿದೆಯಾ ? ಆಯಾಸವೇನೂ ಇಲ್ಲದೆ, ನಿತ್ಯಕೃತ್ಯಗಳನ್ನು ನಡೆಯಿಸಿದಿರೇ ?

ರಾಮ :—ಪೂಜ್ಯರೇ ! ತಾವು ಮೊನ್ನಿನದಿನದಲ್ಲಿ ಅನುಗ್ರಹಿಸಿ ಉಪದೇಶಿಸಿದ- 'ಬಲೆ, ಅತಿಬಲೆ' ಎಂಬ ಮಂತ್ರಪಠನದಿಂದ ನಮ್ಮ ಆಯಾಸವೆಲ್ಲಾ ಪರಿಹಾರವಾಯ್ತಲ್ಲದೆ ಉತ್ಸಾಹವೂ ಶಕ್ತಿಯೂ ಕಾಂತಿಯೂ ಹೆಚ್ಚುತ್ತ ಬರುತ್ತಿರುವುದು.

ಲಕ್ಷ್ಮಣ :—ಪೂಜ್ಯರೇ ! ತಾವು ರಾತ್ರಿಯೆಲ್ಲಾ ಹೇಳಿದ ಈ ಪುಣ್ಯಸ್ಥಳ ಕ್ಷೇತ್ರ ವೃತ್ತಾಂತ, ಮಹಾತ್ಮೆಗಳನ್ನು ಕೇಳಿ ನಮಗೆ ಮತ್ತೂ ಆನಂದೋತ್ಸಾಹಗಳುಂಟಾಗಿ, ಮುಂದೆ ಇರುವ ಕ್ಷೇತ್ರಗಳನ್ನೂ ನೋಡುವ ಕುತೂಹಲವುಂಟಾಗಿದೆ.

ವಿಶ್ವಾ :—ಸುಕುಮಾರರೇ ! ನಿಮ್ಮಿಂದ ಕೌಸಲ್ಯಾ ಸುಮಿತ್ರೆಯರು ಸುಪುತ್ರವತಿಯರೆನ್ನಿಸಿದರು ! ನಿಮ್ಮನ್ನು ಪುತ್ರರನ್ನಾಗಿ ಪಡೆದ ಅವರ ಭಾಗ್ಯವು ಮಹತ್ತರವೆನಿಸಿತು !

ರಾಮ<br>ಲಕ್ಷ್ಮಣ } :—ಎಲ್ಲವೂ ತಮ್ಮ ಅನುಗ್ರಹ ಬಲದಿಂದಾದುದು ?

(ಋಷಿಪುತ್ರರು ಪ್ರವೇಶಿಸುವರು.)

ಋಷಿ :—(ಕೈಮುಗಿದು) ಪೂಜ್ಯರಿಗೆ ನಮಸ್ಕಾರ. ಮಹರ್ಷಿ

ಗಳೆಲ್ಲರೂ ತಮ್ಮ ಅಪ್ಪಣೆಯಂತೆ ಸರಯೂ ನದಿಯನ್ನು ದಾಟಲು ದೋಣಿಯನ್ನು ಸಿದ್ಧಪಡಿಸಿಕೊಂಡು ಕಾದಿರುವೆವೆಂದು ವಿಜ್ಞಾಪಿಸುವರು.

ವಿಶ್ವಾ — ಇದೋ ಬಂದೆವು. (ರಾಮಲಕ್ಷ್ಮಣರನ್ನು ಕುರಿತು) ಸುಕುಮಾರರೇ ಹೊರಡಿರಿ.

(ಹೊರಡುವರು.)

(ಸರಯೂ ನದೀತೀರದಲ್ಲಿ ದೋಣಿಯನ್ನು ಸಿದ್ಧಪಡಿಸಿಕೊಂಡು ಅಂಬಿಗನು ನಿಂತಿರುವನು. ಋಷಿಗಳೆಲ್ಲರೂ ನಿರೀಕ್ಷಿಸುತ್ತಿರುವರು. ರಾಮಲಕ್ಷ್ಮಣರೊಡನೆ ವಿಶ್ವಾಮಿತ್ರನು ಬರುವನು.)

ಋಷಿಗಳು :— (ಕೈಜೋಡಿಸಿ) ಮಹಾತ್ಮರೇ ! ಲೋಕಕ್ಷೇಮಕ್ಕಾಗಿ ಹೊರಟಿರುವ ತಾವು, ಸುಕುಮಾರರಾದ ಈ ರಾಮಲಕ್ಷ್ಮಣರೊಡನೆ ಈ ದೋಣಿಯನ್ನೇರಲು ಇದೇ ಸುಮುಹೂರ್ತವಾಗಿದೆ. ಇನ್ನೇಕೆ ವಿಳಂಬ ?

ವಿಶ್ವಾ:— ತಪೋಧನರೇ! ನಿಮ್ಮೆಲ್ಲರ ಆದರಾತಿಥ್ಯದಿಂದ ಪರಮಾತ್ಮನು ಸುಪ್ರೀತನಾಗಿರುವನು. ಆತನ ಅನುಗ್ರಹದಿಂದ ನಿಮ್ಮೆಲ್ಲರ ಸಂಕಲ್ಪ ಸಿದ್ಧಿಯಾಗಲೆಂದು ಹಾರೈಸುವೆವು. (ಪಕ್ಕಕ್ಕೆ ತಿರುಗಿ) ಸುಕುಮಾರರಾದ ರಾಮಲಕ್ಷ್ಮಣರೇ ! ಬನ್ನಿರಿ,- ಮೆಲ್ಲನೆ ದೋಣಿಯನ್ನೇರಿರಿ!

(ಮೂವರೂ ದೋಣಿಯನ್ನೇರಿ, ಋಷಿಗಳಿಂದ ಬೀಳ್ಕೊಳ್ಳುವರು ; ದೋಣಿಯು ಹೊರಡುವುದು, ಮೂವರೂ ಕುತೂಹಲದಿಂದ ನದಿಯ ಪರಿಳಿತವನ್ನು ನೋಡುತ್ತ ಗಮನಸುಖವನ್ನು ಅಭಿನಯಿಸುವರು. ದೋಣಿಯು ಸರಯೂನದಿಯ ದಕ್ಷಿಣ ತೀರದ ಬಳಿಗೆಬಂದು ನಿಲ್ಲಿಸಲ್ಪಡುವುದು. ತೆರೆಯಲ್ಲಿ ಮಹತ್ತರವಾಗಿ ಭೋರ್ಗರೆವ ಶಬ್ದವಾಗುವುದು.)

ರಾಮ :— ಕುತೂಹಲದಿಂದ ಪೂಜ್ಯರೇ ! ಇದೇನು, ಮಹಚ್ಛಬ್ದವಾಗುವುದು ?

ವಿಶ್ವಾ :—ಸುಕುಮಾರರೇ! ಬ್ರಹ್ಮನಿರ್ಮಿತವಾದ ಮಾನಸಸರೋವರದಿಂದ ಹುಟ್ಟಿದ ಈ ಸರಯೂನದಿಯು, ಅಯೋಧ್ಯಾನಗರವನ್ನು ಸುತ್ತಿಕೊಂಡು ಬಂದು ಗಂಗೆಯೊಡನೆ ಸೇರುವಕಾಲದಲ್ಲಿ ಉಂಟಾಗುತ್ತಿರುವ ಶಬ್ದವೇ ಇದು. ಆದುದರಿಂದ ನೀವು ಮೆಲ್ಲನೆ ದೋಣಿಯಿಂದಿಳಿದು, ಈ ಪುಣ್ಯನದಿಗಳಿಗೆ ನಮಸ್ಕರಿಸಿರಿ, (ಮೂವರೂ ದೋಣಿಯಿಂದಿಳಿದು ತೀರದಲ್ಲಿ ನಿಂತು ಕೈ ಮುಗಿಯುವರು.)

ರಾಮ
ಲಕ್ಷ್ಮಣ } :—(ವಿನಯದಿಂದ ಕೈಜೋಡಿಸಿ) ಹೇ, ತ್ರಿಲೋಕಪಾವನೆಯಾದ ಗಂಗೆ! ಚಂದ್ರಚೂಡ ಶಿರೋಭೂಷಣೆಯಾದ ಗಂಗೆ! ಸಗರವಂಶಪಾವನೆಯಾದಗಂಗೆ! ನಿನಗಿದೆ-ಇದೆ ನಮಸ್ಕಾರಗಳು. ಹೇ, ಮಾನಸಸರೋವರ ಸಂಜಾತೆಯಾದ ಸರಯೂ! ಕೋಸಲದೇಶಕ್ಕೆ ಅಲಂಕಾರಪ್ರಾಯಳಾದ, ಪರಮಪಾವನೆಯಾದ, ಇಕ್ಷ್ವಾಕುಕುಲದರಸರಿಗೆ ಅಭಿಮಾನಾಸ್ಪದೆಯಾದ, ಸರಯೂ! ನಿನಗಿದೆ-ಇದೆ, ನಮಸ್ಕಾರಗಳು. (ಮೇಲೆನೋಡುತ್ತ) ಹೇ, ಭಗವನ್, ಭಾಸ್ಕರ, ಸುರವರ, ಭವಹರ, ಭಕ್ತಮಂದಾರ! ಭಯದೂರ! ನಿನಗಿದೊ ಇದೋ ನಮಸ್ಕಾರಗಳು! ಸರ್ವವ್ಯಾಪಿಯೂ, ಸರ್ವಸಾಕ್ಷಿಯೂ, ಕ್ಷೇಮಂಕರನೂ, ಜಗದುಜ್ಜೀವನನೂ, ಇಕ್ಷ್ವಾಕುಕುಲದ ಮೂಲಪುರುಷನೂ ಆದ ಭಗವಾನ್ ದಿನನಾಥನೇ! ನಿನಗಿದೋ ಇದೋ ನಮಸ್ಕಾರಗಳು! [ಅ. ೫+೬.]

ವಿಶ್ವಾ :—ಸುಕುಮಾರರೇ! ಇನ್ನೂ ಬಹುದೂರ ಹೋಗಬೇಕು. ತ್ವರೆಮಾಡಿರಿ.

ರಾಮ
ಲಕ್ಷ್ಮಣ } :—ಪೂಜ್ಯರ ಆಜ್ಞೆಯಂತೆಯೇ ನಡೆಯಲಿದೋ ಸಿದ್ಧರಾಗಿರುವೆವು.

ಅಂಬಿಗ :—(ಕೈಮುಗಿದು) ಮಹಾತ್ಮರೇ! ನನಗಿನ್ನು ಅಪ್ಪಣೆಯೇ?

ವಿಶ್ವಾ :—ಒಳಿತು, ನೀನು ಹೊರಡಬಹುದು. (ಅಂಬಿಗನು ಹೋಗುವನು.) (ವಿಶ್ವಾಮಿತ್ರನು ರಾಮಲಕ್ಷ್ಮಣರೊಡನೆ ಹೊರಟು ಗಮನವನ್ನು ಅಭಿನಯಿಸುವನು.)

(ಕಾನನ ಪ್ರಾಂತದಲ್ಲಿ ಮೂವರೂ ಪ್ರವೇಶಿಸುವರು)

ರಾಮ :—ಪೂಜ್ಯರೇ! ಈ ಪ್ರದೇಶವು ಹೀಗೆ ನಿರ್ಜನವಾಗಿಯೂ ಭಯಂಕರವಾಗಿಯೂ ಕಾಣುತ್ತಿದೆಯಲ್ಲಾ! ಇದರ ಹೆಸರೇನು? ಮೊದಲಿಂದಲೂ ಈ ಪ್ರದೇಶವು ಹೀಗೆಯೇ ಇದ್ದಿತೇ?

ವಿಶ್ವಾ :—ಈ ಪ್ರದೇಶವು ಮೊದಲು ಇಂದ್ರನ ಅಭಿಮಾನಕ್ಕೆ ಆಸ್ಪದವಾಗಿ, ಮಲದ-ಕರೂಶವೆಂಬ ಹೆಸರಿನ ಫಲವತ್ತಾದ ದೇಶಗಳಾಗಿದ್ದುವು

ಲಕ್ಷ್ಮಣ :—ಮಲದ ಕರೂಶವೆಂಬ ಹೆಸರು ಬರಲು ಕಾರಣವೇನು?

ವಿಶ್ವಾ :—ಇಂದ್ರನು ವೃತ್ರಾಸುರನನ್ನು ವಧಿಸಿದ ಕಾಲದಲ್ಲಿ ಉಂಟಾದ ಪಾತಕದಿಂದ ತೇಜೋಹೀನನಾಗಿರಲು, ದೇವತೆಗಳೆಲ್ಲರೂ ಇಂದ್ರನಿಂದ ಹತ್ಯಾದೋಷನಿವಾರಣೆಗೆ ಕರ್ಮವನ್ನು ನಡೆಯಿಸಿದರು. ಆಗ ಆತನಿಂದ ಬಿಡಲ್ಪಟ್ಟ ಪಾತಕವು ಮಲ-ಕರೂಶರೂಪದಿಂದ ಹೊರಬೀಳಲು ಈ ಸ್ಥಳವು ಅದನ್ನು ಒಳಗೊಂಡು, ಇಂದ್ರನಿಂದ ವರವನ್ನು ಪಡೆದು, ಅದೇ ಹೆಸರಿನ ಪಟ್ಟಣಗಳಾದವು.

ರಾಮ :—ಹಾಗಿದ್ದ ಪ್ರದೇಶವು ಹೀಗಾಗಲು ಕಾರಣವೇನು?

ವಿಶ್ವಾ:—ಕ್ರೂರಳಾದ ತಾಟಕಿಯ ಆವಾಸಸ್ಥಾನವಾಗಿರುವುದರಿಂದ ಭಯಂಕರವಾಗಿರುವುದು.

ರಾಮ :—ತಾಟಕಿಯೆಂಬುವಳು ಯಾರು ? ಅವಳ ವೃತ್ತಾಂತವೇನು ?

ತಾಟಕಿ :—ಅವಳು ಮೊದಲು ಯಕ್ಷಕನ್ಯೆಯಾಗಿ, ವರಪ್ರಭಾವದಿಂದ ಸಾವಿರ ಆನೆಗಳ ಬಲವುಳ್ಳವಳಾಗಿ, ಸುಂದನೆಂಬ ಯಕ್ಷನ ಪತ್ನಿಯಾಗಿದ್ದಳು. ಸುಂದನು ತನ್ನ ಉದ್ಧಟತನದಿಂದ ಮಹಾತ್ಮರಾದ ಅಗಸ್ತ್ಯರ ಆಗ್ರಹಕ್ಕೆ ಗುರಿಯಾಗಿ ಮೃತನಾದನು.

ರಾಮ :—ಆಮೇಲಾಮೇಲೆ ?

ವಿಶ್ವಾ —ಆ ಬಳಿಕ, ತಾಟಕಿಯು ತನ್ನ ಮಗನಾದ ಮಾರೀಚನೊಡನೆ ಅಗಸ್ತ್ಯರನ್ನು ಹಿಂಸಿಸಲು ಹೋಗಿ, ಅವರ ಶಾಪದಿಂದ ಘೋರ ರಾಕ್ಷಸಳಾದಳು. ಅಂದಿನಿಂದಲೂ ಅದೇ ದ್ವೇಷದಿಂದ ಅವರ ಆಶ್ರಮ ಪ್ರಾಂತವಾದ ಈ ಪ್ರದೇಶವನ್ನೆಲ್ಲಾ ಹಾಳುಮಾಡುತ್ತಿರುವಳು. ಆ ಲೋಕಕಂಟಕಳಿಂದ ನಿಮಗಾವ ಅಪಾಯವೂ ಆಗದಿರಲಿ.

ರಾಮ:—ಹಾಗಾದರೆ ಆ ತಾಟಕಿಯಷ್ಟು ಲೋಕಕಂಟಕಳೇ ?

ವಿಶ್ವಾ:—ಅಷ್ಟೇ ಅಲ್ಲ ; ಕೇಳು, ರಾಮಚಂದ್ರ! ಅವಳು ರಾವಣನ ಕಡೆಯವಳಾಗಿ, ಎಲ್ಲಿ, ಯಾವ ಕಡೆಯಲ್ಲಿ, ಯಜ್ಞಯಾಗಾದಿಗಳಾಗುವುವೋ ಅಲ್ಲಿಗೆಬಂದು, ದೇವ, ಗೋ-ಭೂ ದ್ವಿಜರನ್ನೆಲ್ಲಾ ಹಿಂಸಿಸಿ, ಹೇಳಿ-ಕೇಳಿ ತಾಳಲಾಗದಷ್ಟು ಕ್ರೂರ ಕಾರ್ಯಗಳನ್ನು ಮಾಡುತ್ತಿರುವಳು. ಯಾರಿಂದಲೂ ನಿಗ್ರಹಿಸಲಸಾಧ್ಯಳಾದ ಆ ತಾಟಕಿಯನ್ನು ನೀನೇ ನಿಗ್ರಹಿಸಬೇಕಾಗಿರುವುದು. ಮೊದಲು ನೀನವಳನ್ನು ಕೊಂದು, ಲೋಕಕ್ಷೇಮವನ್ನುಂಟು ಮಾಡಬೇಕು.

ರಾಮ :—|| ಸ್ವಗತಂ || ಏನಿದು ! ಸ್ತ್ರೀಯರು ಅವಧ್ಯರೆಂದು ಶಾಸ್ತ್ರವಚನವಿರುವುದು. ಇವರಾದರೆ ಸ್ತ್ರೀವಧೆ ಮಾಡಹೇಳುತ್ತಿರುವರು. ನಮ್ಮನ್ನು ಬೀಳ್ಕೊಡುವಾಗ ನಮ್ಮ ಜನಕನು, ಈ ವಿಶ್ವಾಮಿತ್ರರನ್ನು

ತನ್ನಂತೆಯೇ ಭಾವಿಸಿ ಇವರ ಆಜ್ಞೆಗೆ ವಿಧೇಯರಾಗಿ ವರ್ತಿಸಬೇಕೆಂದು ಆಜ್ಞಾಪಿಸಿರುವುದರಿಂದ ನಾನು ಈಗ ಇವರ ಆಜ್ಞೆಯಂತೆಯೇ ನಡೆಯಬೇಕಾಗಿದೆ. ಆಗಲಿ, ಇವರನ್ನೇ ಕೇಳುವೆನು. (ಕೈಜೋಡಿಸಿ) ||ಪ್ರಕಾಶಂ|| ಪೂಜ್ಯರೇ! ಸ್ತ್ರೀ ವಧೆಯು ಸಜ್ಜನ ಸಮ್ಮತವಾದುದೇ ?

ವಿಶ್ವಾ :—ಸುಕುಮಾರ ! ನಿನ್ನ ಪ್ರಶ್ನೆಯು ಸಾಧುವಾದುದು ! ಸಾಧಾರಣ ವಿಷಯಗಳಿಗಾಗಿ ಸ್ತ್ರೀವಧೆ ಮಾಡಬಾರದು ! ಇಂತಹ ಲೋಕಕಂಟಕಿಯರನ್ನು ನಿಗ್ರಹಿಸಿ, ಗೋಬ್ರಾಹ್ಮಣರನ್ನು ಉದ್ಧರಿಸಿ ಲೋಕಕ್ಷೇಮವನ್ನುಂಟುಮಾಡುವ ವಿಷಯದಲ್ಲಿ ಸಂಶಯ ಪಡಬಾರದು ! ಇಂತಹ ಸಂದರ್ಭದಲ್ಲಿ ಸ್ತ್ರೀವಧೆ ಮಾಡಲು ಶಾಸ್ತ್ರವಚನವೂ ಇದೆ, ಸಂಪ್ರದಾಯವೂ ಬಂದಿದೆ.

ರಾಮ<br>ಲಕ್ಷ್ಮಣ } :—( ಕುತೂಹಲದಿಂದ ) ವಿಶ್ವಾಮಿತ್ರನನ್ನೇ ನೋಡುವರು.

ವಿಶ್ವಾ:—ರಾಮಚಂದ್ರ ! ನಿನಗಿನ್ನೂ ಸಂಶಯವೇ ? ಹಿಂದೆ, ಲೋಕಕಂಟಕರಾಗಿದ್ದ ದೈತ್ಯರನ್ನು ತನ್ನ ದೇಹದಲ್ಲಿ ಅಡಗಿಸಿಕೊಂಡಿದ್ದುದಕ್ಕಾಗಿ, ಶ್ರೀ ಮಹಾವಿಷ್ಣುವೇ ಮಹಾತ್ಮರಾದ ಭೃಗುಮಹರ್ಷಿಯ ಪತ್ನಿಯನ್ನು ಕೊಂದು, ಶಿಷ್ಟಾಚಾರಕ್ಕೆ ನಿದರ್ಶನ ಮಾಡಿರುವನು !

ಲಕ್ಷ್ಮಣ:— ||ಮೆಲ್ಲನೆ|| ಆರ್ಯನೇ ! ಪೂಜ್ಯರು ನಮಗೆ ವಿಹಿತ ಧರ್ಮವನ್ನೇ ನಿರೂಪಿಸಿರುವರು. (ತೆರೆಯಕಡೆ ನೋಡಿ) ಆರ್ಯನೇ ! ಅದಾರಲ್ಲಿ ಬರುತ್ತಿರುವ ನಾರಿ ? ಯಕ್ಷಿಣಿಯೋ-ರಾಕ್ಷಸಿಯೋ-ಅಥವಾ ಮಾನವಿಯೋ ?

ವಿಶ್ವಾ:—ಇಲ್ಲಿ ರಾಕ್ಷಸರು ಅನೇಕ ಮಾಯಾರೂಪಗಳನ್ನು ತಾಳಿ ಜನರನ್ನು ವಂಚಿಸುತ್ತಲೇ ಇರುವರು.

ರಾಮ:—ಆಗಲಿ, ಬರಲಿ, ಇದಿರಿಗೆ ಬಂದು ಮಾತನಾಡಿದಾಗ ನೋಡುವ.

(ಮಾಯಾವೇಷದ ಸೌಮ್ಯ ಸ್ತ್ರೀಯಾಗಿ ತಾಟಕಿಯ ಪ್ರವೇಶ)

ತಾಟಕಿ:—||ಸ್ವಗತಂ|| ಈತನೇ ಚಂಡಕೌಶಿಕನು! ಇವರೇ ಆ ರಾಮಲಕ್ಷ್ಮಣರೆಂಬುವರಿರಬೇಕು. ಆಹಾ, ಇವರೆಷ್ಟು ಸೌಮ್ಯರಾಗಿರುವರು! ಇರಲಿ, ಮಾತನಾಡಿಸುವೆನು.

||ಪ್ರಕಾಶಂ|| ಯಾರಪ್ಪಾ; ನೀವು! ಈ ಮಾರ್ಗವಾಗಿ ಎಲ್ಲಿಗೆ ಹೋಗುತ್ತೀರಿ?

ಲಕ್ಷ್ಮಣ:—ಅಮ್ಮಾ! ನಾವು ಪೂಜ್ಯರಾದ ವಿಶ್ವಾಮಿತ್ರರ ಆಶ್ರಮಕ್ಕೆ ಹೊರಟಿರುವೆವು. ನೀನಾರು? ಎಲ್ಲಿಗೆ ಹೋಗುವೆ?

ತಾಟಕಿ:—ನಾನೋರ್ವ ಋಷಿಪತ್ನಿ! ಪತಿಯು ಕಾಲಧರ್ಮವನ್ನು ಹೊಂದಿದನು! ಮಹಾತ್ಮನಾದ ವಿಶ್ವಾಮಿತ್ರನೆಂಬ ಮುನಿಯು ಯಾಗಮಾಡುವನೆಂದೂ ಯಾಗಸಂರಕ್ಷಣೆಗಾಗಿ ರಾಮಲಕ್ಷ್ಮಣರೆಂಬ ರಾಜಕುಮಾರರು ಬರುವರೆಂದೂ ಅವರನ್ನು ನೋಡಿ ಬರಲು, ನನ್ನ ಒಬ್ಬನೇ ಮಗನೂ, ತನ್ನ ಮಾವನೊಡನೆ ಹೊರಟುಹೋದನು, ನಾನೊಬ್ಬಳೇ ಇರಲಾರದೆ, ಅವರನ್ನು ನಾನೂ ನೋಡಿಬರಬೇಕೆಂದು ಬರುತ್ತಿದ್ದೇನೆ. ನೀವಾರು?

ಲಕ್ಷ್ಮಣ:—||ಸ್ವಗತಂ|| ಇವಳಭಾವವನ್ನು ನೋಡಿದರೆ, ಮಾಯಾವಿನಿಯೆಂದು ಕಾಣುವಳು. ಇರಲಿ, ||ಪ್ರಕಾಶಂ|| [ಅ. ಲ.] ಅಮ್ಮಾ! ನೀನು ಹೇಳಿದ ಮಹಾಮಹಿಮರಾದ ವಿಶ್ವಾಮಿತ್ರರೆಂಬುವರೇ-ಈ ತಪೋಧನರು! ಈತನೇ ಮಖರಕ್ಷಕನಾಗಿ ಬಂದಿರುವ ರಾಮಚಂದ್ರನು! ಈತನ ಅನುಜಾತನೇ ನಾನು! ನಿನಗೆ ಯಜ್ಞವನ್ನು ನೋಡವ ಇಚ್ಛೆಯಿದ್ದರೆ ಬರಬಹುದು.

ತಾಟಕಿ :—|| ಸ್ವಗತಂ || ಈ ಕೌಶಿಕನು ಬಹುಕ್ರೂರನು ! ಇವರಿಬ್ಬರೂ ಸೌಮ್ಯರು. ಇವರನ್ನು ಪರಸ್ಪರ ಅಗಲಿಸಿದರೆ ನಮ್ಮ ಉದ್ದೇಶವು ನಿರಾಯಾಸವಾಗಿ ಸಿದ್ಧಿಸುವುದು ಮೊದಲು, ಈ ರಾಮ ನನ್ನೇ ಎತ್ತಿಕೊಂಡು ಹೋಗುತ್ತೇನೆ.

ಲಕ್ಷ್ಮಣ :—ಆಲೋಚಿಸುವೆಯೇನು ?

ತಾಟಕಿ :—ಮತ್ತೇನೂ ಇಲ್ಲ. ನಾನು ಹೆಂಗಸು. ಬಹುದೂರ ನಡೆದುಹೋಗುವುದು ಕಷ್ಟ ! ಅನಾಯಾಸವಾಗಿ, ಇಲ್ಲಿಯೇ ನಿಮ್ಮ ದರ್ಶನ ವಾದಮೇಲೆ ಅಲ್ಲಿಗೇಕೆಹೋಗಲಿ ? ನಿಮ್ಮನ್ನೇ ನನ್ನ ಆಶ್ರಮಕ್ಕೆ ಕರೆದೊಯ್ದು, ಯಥಾಶಕ್ತಿಸತ್ಕರಿಸಿ ಕಳುಹಿಸಬೇಕೆಂದು ಎಣಿಸುತ್ತಿದ್ದೆ. (ಮುಂದೆಬಂದು) ರಾಮಚಂದ್ರ ! ದಯೆಯಿರಿಸಿ ನನ್ನ ಆಶ್ರಮಕ್ಕೆ ಬಾ ?

ರಾಮ :—(ನಸುನಕ್ಕು) ಎಲೌ, ಲೋಕಕಂಟಕರಾದ ತಾಟಕಿ, ಮಾರೀಚ-ಸುಬಾಹುಗಳನ್ನು ನಿಗ್ರಹಿಸಿ, ಕೃತಾರ್ಥರಾದಲ್ಲದೆ, ಎಲ್ಲಿಗೂ ಬರಲಾಗುವುದಿಲ್ಲ.

ತಾಟಕಿ :—ಏನು ? ನೀವು, ಇನ್ನೂ ಇದೇ ಕಣ್ತೆರೆಯುತ್ತಿರುವಂಥ ಸಣ್ಣ ಹುಡುಗರಾದ ನೀವು, ಲೋಕಭಯಂಕರಳಾದ ಆ ತಾಟಕಿಯನ್ನು ಕೊಲ್ಲುವುದು ! ಅಬ್ಬಾ ! ಅವಳ ಆರ್ಭಟವನ್ನು ನೋಡಿ ಸಹಿಸಲಿಕ್ಕೂ ನಿಮಗಾಗದು ! ಸಾವಿರ ಆನೆಯ ಬಲವುಳ್ಳ ಆ ರಕ್ಕಸಿಯನ್ನು ಕೆಣಕಿ ಗಾಸಿಯಾಗಬೇಡಿರಿ. ಅನ್ಯಾಯವಾಗಿ ಮೋಸಹೋಗುತ್ತೀರಿ. ನನ್ನ ಮಾತನ್ನು ಕೇಳಿರಿ !

ರಾಮ :—(ವಿಶ್ವಾಮಿತ್ರರಕಡೆಗೆ ತಿರುಗುವನು)

ಲಕ್ಷ್ಮಣ :—(ದರ್ಪದಿಂದ) ಎಲೆ ಭೀರು, ನಿನಗದರಚಿಂತೆಯೇಕೆ ? ಈ ಮಹಾತ್ಮರು ಕ್ರೋಧಾವಿಷ್ಟರಾಗಿ ಒಮ್ಮೆ ನೋಡಿದರೆಂದರೆ ಸಾಕು, ಸಪರಿವಾರಳಾದ ತಾಟಕಿಯು ಭಸ್ಮವಾಗುವಳು. ಆರ್ಯ

ನಾದ ರಾಮಚಂದ್ರನಮುಂದೆ ಇಂಥ, ಸಾವಿರಾರು ತಾಟಕಿಯರು ಬಂದರೂ ಕ್ಷಣಮಾತ್ರದಲ್ಲಿ ಹತರಾಗಿ ಹೋಗುವರು. ನಿನಗದರಭೀತಿ ಯೇಕೆ ? ವೃಥಾ ರಾಮಚಂದ್ರನನ್ನು ತಡೆದು ಗುರುಕಾರ್ಯಕ್ಕೆ ವಿಘ್ನ ಮಾಡಿ ಅವರ ಆಗ್ರಹಕ್ಕೆ ಗುರಿಯಾಗಬೇಡ.

ತಾಟಕಿ :—ಸುಕುಮಾರನೇ ! ರಾಮನಿಗಿಂತಲೂ ನೀನು ವಾಚಾಳಿಯೂ, ವೀರನೂ, ಲಕ್ಷಣಯುತನೂ ಆಗಿದ್ದೀ ! ನನ್ನ ಮಗನು ಬರುವವರೆಗೆ, ನಿನ್ನನ್ನೇ ನನ್ನ ಆಶ್ರಮದಲ್ಲಿರಿಸಿಕೊಂಡು ಉಪಚರಿಸುವೆನು. ನನ್ನೊಡನೆ ಬಾ.

ವಿಶ್ವಾ :—ಛಿ!, ಸ್ತ್ರೀಯಾದ ನಿನಗೀಧೂರ್ತತೆ ಸಲ್ಲದು ! ಇಲ್ಲಿ ರಾಕ್ಷಸರಮಾಯೆ ನಡೆಯಲಾರದು. ಮಾನವಿಯಾಗಿದ್ದರೆ ಮಾನದಿಂದ ಹೋಗು, ರಾಕ್ಷಸಿಯಾಗಿದ್ದರೆ ತಕ್ಷಣ ತಲೆತಪ್ಪಿಸಿಕೊಳ್ಳಲು ದೂರ ತೊಲಗು. [ಅ. ೭]

ತಾಟಕಿ :—(ದಿಗ್ಭ್ರಮೆಗೊಂಡು ನಿಂತು) || ಸ್ವಗತಂ || ಇವನು ಕುಪಿತನಾಗಿ ಶಪಿಸಿದರೆ ಕಷ್ಟ ! ಇರಲಿ, ||ಪ್ರಕಾಶಂ|| ಅಪ್ಪಾ ! ನಿಮಗೆ ಲೇಸಾಗಲೆಂದೇ ನಾನು ಹೇಳಿದೆನು. ನನಗೇನು, ನೀವೇ ಅನುಭವಿಸುವವರು ! ಇದಂತೂ ತಾಟಕಿಯು ವನ ! ಇಲ್ಲಿಂದ ಪಾರಾಗುವದು ನಿಮಗೆ ಅಸಾಧ್ಯವೆಂದು ನೀವೇ ತಿಳಿಯುವಿರಿ ! ನಾನು ಹೋಗುವೆನು. (ಹೊರಟುಹೋಗುವಳು)

ಲಕ್ಷ್ಮಣ—ಆರ್ಯನೇ ! ಇವಳ ನಡೆನುಡಿಗಳನ್ನು ನೋಡಿದೆಯಾ ? ಇವಳೇ ಆ ತಾಟಕಿಯಾಗಿರಬಹುದೇನು ?

ರಾಮ:—(ಸಸುನಕ್ಕು) ಆದರೆತಾನೇ ಭಯವೇನು ? ಪೂಜ್ಯರ ಶಾಸನವಿದ್ದೇ ಇದೆ !

ವಿಶ್ವಾ:—ವತ್ಸರೇ ! ಇದೋ ನೋಡಿರಿ, ತಾಟಕಿಯ ಮಾಯೆ

ಯೇ ಇದು; ಕತ್ತಲೆ ಕವಿದಿರುವುದು. ಆಕಸ್ಮಿಕವಾಗಿ ಗುಡುಗು ಮಿಂಚುಗಳು ಕಾಣುತ್ತಿರುವುವು. ರಾಮನಾ! ಇನ್ನು ವಿಳಂಬ ಮಾಡದೆ ಮೊದಲು ಇವಳನ್ನು ನಿಗ್ರಹಿಸು.

ರಾಮ:—ಪೂಜ್ಯರೇ! ದಿಕ್ಕುಗಳೇ ತೋರದಂತೆ ಕಗ್ಗತ್ತಲೆ ಕವಿದಿರುವುದು. ಅವಳೆಲ್ಲಿರುವಳೆಂದು ತಿಳಿಯಲಿ? (ಧನುಷ್ಟಂಕಾರಮಾಡುವನು.)

|| ತೆರೆಯಲ್ಲಿ || (ಏಕಾರವಾದ ಘರ್ಜನೆಯಾಗುವುದು.)

ಲಕ್ಷ್ಮಣ:—(ಮೇಲೆ ನೋಡಿ) ಆರ್ಯನೆ! ನೋಡು, ನೋಡು, ಹಿಮಾಲಯವೇ ಹಾರಿಬರುವಂತೆ ಆ ಕಾಳರಕ್ಕಸಿ, ಕಲ್ಲು ಗುಡ್ಡಗಳನ್ನೇ ಹಿಡಿದುಕೊಂಡು ವೇಗದಿಂದೀಕಡೆಗೇ ಬರುತ್ತಿರುವಳು. [ಅ ಲ.]

ವಿಶ್ವಾ:—ರಾಮನೇ! ತ್ವರೆಮಾಡು, ತ್ವರೆಮಾಡು, ಬಾಣವನ್ನು ಬಿಡು.

ತಾಟಕಿ:—(ಮರೆಯಲ್ಲಿ) ಹೀಹೀಹೀ! ಪರಾಕ್ರಮದಲ್ಲಿ ನೀನು ಮುಕ್ಕಣ್ಣನೇಸರಿ! ಆದರೂ ಎಲೆ ಬಾಲಕ, ನನ್ನ ಇದೊಂದು ಪೆಟ್ಟನ್ನು ತಿಂದು ಗಟ್ಟಿಯಾಗಿ ನಿಲ್ಲು; ನೋಡುವೆನು. (ಘರ್ಜಿಸುವಳು)

ರಾಮ:—(ಮೇಲೆನೋಡಿ ನಸುನಕ್ಕು, ಧನುಷ್ಟಂಕಾರ ಮಾಡಿ) ಎಲೆಲೆ, ಮಾಯಾವಿನಿ, ಧೂರ್ತೆ! ಹಾರಾಡಬೇಡ, ಈ ಬಾಣದಿಂದ ನಿನ್ನ ಕೈಯ್ಯಲ್ಲಿರುವ ಈ ಗುಡ್ಡಗಳು ಪುಡಿಪುಡಿಯಾಗಿ ಹೋಗುವುದನ್ನೂ ಈ ಬಾಣದಿಂದ ನಿನಗಾಗುವ ಅವಸ್ಥೆಯನ್ನೂ ನೋಡು!

(ಬಾಣಪ್ರಯೋಗ ಮಾಡುವನು, ತೆರೆಯಕಡೆ ಮಹಚ್ಛಬ್ದವಾಗುವುದು.)

ವಿಶ್ವಾ:—[ಕುತೂಹಲದಿಂದ ನೋಡುತ್ತಿರುವನು.]

ಲಕ್ಷ್ಮಣ:—(ತೆರೆಯಕಡೆ ನೋಡುತ್ತ) ಆರ್ಯನೇ! ನೋಡಲ್ಲಿ,

ಆ ರಕ್ಕಸಿ, ನಿನ್ನ ಬಾಣದಿಂದ ತನ್ನ ತೋಳುಗಳಲ್ಲಿ ಉಂಟಾದ ಗಾಯ ಗಳಿಂದ ರಕ್ತವು ಸುರಿಯುತ್ತಿದ್ದರೂ ಲಕ್ಷ್ಯವಿಲ್ಲದೆ ಇಲ್ಲಿಗೇ ಬರುತ್ತಿರು ವಳು. ನೋಡು, ನೋಡು,

ರಾಮ :—(ನಸುನಕ್ಕು) ಬರಲಿ, ಮೊದಲು, ಇವಳ ಕಿವಿ ಮೂಗುಗಳನ್ನು ಛೇದಿಸಿ ಇವಳದರ್ಪವನ್ನು ಮುರಿಯುವ.

ವಿಶ್ವಾ :—ಸುಕುಮಾರರೇ ! ನಿಂತು ಏನೋದ ನೋಡುತ್ತಿರು ವಿರೇನು ? ಜಾಗ್ರತೆಯಾಗಿ ಈ ಕ್ರೂರ ರಕ್ಕಸಿಯನ್ನು ಸಂಹರಿಸಿ ಭಯ ವನ್ನು ಪರಿಹರಿಸಿರಿ.

ರಾಮ :— ಪೂಜ್ಯರೇ ! ತಮ್ಮ ಶಾಸನವು ಅಮೋಘವಾದುದು ! ತಮ್ಮ ಆಜ್ಞೆಯಂತೆ ಜಾಗ್ರತೆಯಾಗಿಯೇ ಇವಳಿಂದಾಗಿರುವಭಯವನ್ನು ಪರಿಹಾರಮಾಡುವೆನು ನಿರೀಕ್ಷಿಸಿ ಅನುಗ್ರಹಿಸಬೇಕು.

ಲಕ್ಷ್ಮಣ :—(ಮೇಲೆನೋಡಿ ಗುರಿಯಿಟ್ಟು ಬಾಣವನ್ನು ಬಿಟ್ಟು) ಆರ್ಯನೇ ! ನೋಡುನೋಡು ! ತಾಟಕಿಯ ಕಿವಿ ಮೂಗುಗಳು ಹರಿದು ಹೋದುವು. ಆದರೂ ಅವಳು ಹಿಂದಿರುಗದೆ, ಇಲ್ಲಿಗೇ ಬರುವಳು.

ತಾಟಕಿ :—(ಕ್ರೋಧಾವೇಶದಿಂದ ಓಡಿಬಂದು) ಎಲೆಲೆ, ಬುದ್ಧಿ ಯಿಲ್ಲದ ಬಾಲಕರೇ ! ಈ ವೃದ್ಧನಮಾತನ್ನು ಕೇಳಿ ಹಾರಾಡುತ್ತೀರಿ ! ಮೊದಲು, ನಿಮ್ಮಿಬ್ಬರನ್ನೂ ಎತ್ತಿಕೊಂಡುಹೋಗಿ, ಶಿಕ್ಷಿಸಿ, ಆಮೇಲೆ ಈ ಮುದುಕನನ್ನು ವಿಚಾರಿಸಿಕೊಳ್ಳುವೆನು ! (ಬಳಿಗೆ ಬರುವಳು)

ವಿಶ್ವಾ :—ರಾಮಚಂದ್ರಾ ! ಇವಳಲ್ಲಿ ಮರುಕವಿನ್ನು ಸಾಕು. ದುಷ್ಟನಿಗ್ರಹಕ್ಕೆ ಕಾಲವಿಳಂಬ ಮಾಡಬೇಡ. ಸಾಯಂಕಾಲವಾಗುತ್ತ ಬರುತ್ತಿದೆ. ತ್ವರೆಮಾಡು.

ತಾಟಕಿ :—(ವಿಶ್ವಾಮಿತ್ರನನ್ನು ನೋಡಿ ಘರ್ಜಿಸುವಳು)

ರಾಮ :—(ನಗುತ್ತ) ಎಲೆ, ಧೂರ್ತೆ ! ಈವರೆಗೆ ಕನಿಕರದಿಂದ

ನಿನ್ನನ್ನು ಕೊಲ್ಲದೆ ಬಿಟ್ಟೆವು. ಇನ್ನು ನೀನೆಲ್ಲಿ ಅಡಗಿದರೂ ಉಳಿಯ ಲಾರೆ! (ಧನುಷ್ಟಂಕಾರಮಾಡುವನು)

ತಾಟಕಿ :—(ರಾಮನನ್ನು ನೋಡುತ್ತ ಭಯವಿಹ್ವಲೆಯಾಗಿ ಓಡಿಹೋಗುವಳು)

ರಾಮ :—(ನಗುತ್ತ) ಹುಂ, ಓಡು ಓಡು! ಎಲ್ಲಿಗೆ ಹೋದರೂ ಉಳಿಯಲಾರೆ.

(ಬಾಣವನ್ನು ಬಿಡುವನು. ತೆರೆಯಕಡೆ ಭಯಂಕರ ಶಬ್ದವಾಗುವುದು)

ಲಕ್ಷ್ಮಣ :—(ತೆರೆಯಕಡೆ ನೋಡಿ) ಆರ್ಯನೆ, ಆರ್ಯನೆ! ನೋಡು ನೋಡು! ತಾಟಕಿಯು ಮೃತಳಾಗಿಬಿದ್ದಳು. (ವಿಶ್ವಾಮಿತ್ರರ ಕಡೆಗೆ ತಿರುಗಿ) ಪೂಜ್ಯರೆ! ಲೋಕಕಂಟಕಳೂ ಭಯಂಕರಳೂ ಆದ—ಆ ತಾಟ ಕಿಯ ಮೃತದೇಹವನ್ನು ನೋಡಬೇಕು. ಹಿಮಾಲಯವೇ ಉರುಳಿಬಿದ್ದಂತೆ ಆ ಕರಾಳದೇಹವು ಯೋಜನದಷ್ಟು ಉದ್ದವಾಗಿ ಬಿದ್ದಿರುವುದು. [ಅ. ೧೦.]

॥ ಗಗನದಲ್ಲಿ ॥ ದೇವದುಂದುಭಿಯೊಡನೆ ಪುಷ್ಪವೃಷ್ಟಿಯಾಗು ವುದು.

ವಿಶ್ವಾ :—(ತಲೆಯೆತ್ತಿ ನೋಡಿ ಸಂತೋಷದಿಂದ) ಸುಕುಮಾ ರರೇ! ನೋಡಿರಿ, ನೋಡಿರಿ! ತಾಟಕಾವಧದಿಂದ ಸಂತುಷ್ಟರಾದ ದೇವ ತೆಗಳು, ಗಗನದಲ್ಲಿ ನಿಮ್ಮನ್ನೇ ಸ್ತುತಿಸುತ್ತಿರುವರು! ಇದೋ—ಇದೋ! ತ್ರಿಲೋಕಾಧಿಪತಿಯಾದ ಇಂದ್ರನು ಇತ್ತಕಡೆಗೇ ಬರುತ್ತಿರುವನು. ನೋಡಿರಿ!

(ದೇದೀಪ್ಯಮಾನನಾದ ಇಂದ್ರನು ವಿಮಾನದಿಂದಿಳಿದು ಬರುವನು)

ಇಂದ್ರ :—(ರಾಮನ ಕೈಹಿಡಿದು) ಭಗವಂತನಾದ ರಾಮಚಂ ದ್ರನೆ! ಭಕ್ತವತ್ಸಲನೆ! ಸುರವೈರಿ ಭಯಂಕರನೆ! ನಿನಗೆ ಜಯಜಯ ಕಾರವು [ಅ. ೧೧.]

ವಿಶ್ವಾ :—ವಾಸವನಿಗೆ ವಿಜಯವಾಗಲಿ!

ರಾಮ :—ಸುರೇಂದ್ರನೇ! ತ್ರಿಲೋಕಾಧಿಪತಿಯಾದ ನಿನಗೆ ಸಾನುಜನಾಗಿ ವಂದಿಸುವೆನು!

ಇಂದ್ರ :—(ಕೈನೀಡಿ, ಸಂತೋಷದಿಂದ) ಮಹಾತ್ಮನಾದ ವಿಶ್ವಾಮಿತ್ರಮುನಿಯೆ! ನಿನ್ನ ಕೃಪೆಯು ಅಮೋಘವಾದುದು! ನಿನ್ನ ಅನುಗ್ರಹದಿಂದ ತಾಟಕಿಯುದೆಸೆಯಿಂದುಂಟಾಗಿದ್ದ ಭಯವು ಪರಿಹರವಾಯಿತು! (ರಾಮನನ್ನು ನೋಡಿ) ರಾಮಭದ್ರ! ತಾಟಕೀವಧವಾದುದರಿಂದ ನಮಗೆ ಪರಮಸಂತೋಷವಾಯಿತು! ಇನ್ನು ಮಾರೀಚಾದಿ ಕ್ರೂರರಾಕ್ಷಸರ ನಿಗ್ರಹವನ್ನೂ ಕುತೂಹಲದಿಂದ ನಿರೀಕ್ಷಿಸುತ್ತಿರುವೆವು.

ವಿಶ್ವಾ :—ಎಲ್ಲವೂ ಭಗವದನುಗ್ರಹ; ದೇವತೆಗಳಾದ ನಿಮ್ಮ ಸಂತೋಷ!

ಇಂದ್ರ :—ಮಹಾತ್ಮ! ನಿನ್ನಲ್ಲಿ ನಾವು ಪ್ರಾರ್ಥಿಸುವುದೇನೆಂದರೆ:—ಅಜೇಯರೂ, ಅಮೋಘರೂ ಆಗಿ, ನಿನ್ನ ಅಧೀನದಲ್ಲಿರುವ ಕೃಶಾಶ್ವಪುತ್ರರಾದ ನೂರುಮಂದಿ ಅಸ್ತ್ರಾಭಿಮಾನ ದೇವತೆಗಳನ್ನೂ ಶ್ರೀರಾಮನ ವಶಪಡಿಸಬೇಕು. ಶ್ರೀರಾಮನಿಂದ ಇನ್ನೂ ಅನೇಕ ಅದ್ಭುತ ಕಾರ್ಯಗಳಾಗಬೇಕಾಗಿರುವುದರಿಂದ ಇಷ್ಟು ಅನುಗ್ರಹ ಮಾಡಬೇಕು.

ವಿಶ್ವಾ :—ಹಾಗೆಯೇ ಆಗಲಿ, ನಾಳಿನ ಪ್ರಾತಃಕಾಲದ ಸುಮುಹೂರ್ತದಲ್ಲಿ ನಿಮ್ಮ ಪ್ರಾರ್ಥನೆಯಂತೆ ರಾಮಚಂದ್ರನಿಗೆ ಸಮಸ್ತ ಅಸ್ತ್ರಗಳನ್ನೂ ಪ್ರಯೋಗೋಪಸಂಹಾರಮಂತ್ರಸಹಿತ ಉಪದೇಶಿಸುವೆನು. ನಿಮಗೆ ಮಂಗಳವಾಗಲಿ!

ಇಂದ್ರ :—ಎಲೈ ವಿಶ್ವಾಮಿತ್ರಮುನಿಯೆ! ನಿನ್ನ ಉಪಕಾರಕ್ಕೆ ನಾವೆಲ್ಲರೂ ಸಂತುಷ್ಟರಾಗಿರುವುದರಿಂದ ನಿಮ್ಮ ಪ್ರತಿಕಾರ್ಯಗಳಲ್ಲಿಯೂ ಸಹಾಯಕರಾಗಿರುವೆವು, ಇನ್ನು ನಿನ್ನ ಉದ್ದೇಶವು ಜಾಗ್ರತೆಯಾ

ಗಿಯೇ ಸಿದ್ಧಿಸುವುದರಲ್ಲಿ ಸಂಶಯವಿಲ್ಲ. [ರಾಮನನ್ನು ನೋಡಿ] ಎಲೈ ರಾಮಚಂದ್ರ! ಸಾನುಜನಾದ, ದುಷ್ಟನಿಗ್ರಹ ಶಿಷ್ಟಪರಿಗ್ರಹ ಕಾರ್ಯದಕ್ಷನಾದ, ಲೋಕೋತ್ತರಗುಣಸಂಪನ್ನನಾದ ನಿನಗೆ ಮಂಗಳವಾಗಲಿ! ನಾವಿನ್ನು ತೆರಳುವೆವು. (ಕೈಮುಗಿವನು, ಮತ್ತೆ ದೇವದುಂದುಭಿಗಳಾಗುವುವು.)

ರಾಮ :—(ಸುಪ್ರೀತನಾಗಿ) ಸಂತೋಷ. (ಇಂದ್ರನು ಅದೃಶ್ಯನಾಗುವನು.)

ವಿಶ್ವಾ :—ವತ್ಸರೆ! ಸಂಧ್ಯಾಕಾಲವು ಸನ್ನಿಹಿತವಾಯ್ತು! ನಡೆಯಿರಿ. ಸಾಯಂಸಂಧ್ಯೆಯನ್ನು ಸೇವಿಸಿ, ರಾತ್ರಿಯನ್ನು ಇಲ್ಲಿಯೇ ಕಳೆದು, ನಾಳಿನ ದಿನ ನಿಮಗೆ ಅಸ್ತ್ರೋಪದೇಶ ಮಾಡುವೆನು. ಆಬಳಿಕ ನನ್ನ ಆಶ್ರಮಕ್ಕೆ ಹೊರಡುವ.

ರಾಮ<br>ಲಕ್ಷ್ಮಣ }—ಆಜ್ಞಾಧೀನರಾಗಿರುವೆವು (ವಿನೀತರಾಗಿ ಮುಂದೆ ನಿಲ್ಲುವರು.)

(ಮೂವರೂ ಹೊರಡುವರು)

ಇಂತು ದ್ವಿತೀಯಾಂಕಂ.



॥ ಶ್ರೀಃ ॥

# ತೃತೀಯಾಂಕಂ

॥ ಭಾ. ಷ. ॥ ಧರಣಿಪಾಗ್ರಣಿಯೆನಿಪ ದಶರಥ
ನರಸಿಯುದರದಿ ಜನಿಸಿ, ಸುಜನರ
ಪೊರೆದು, ದುರುಳರತರಿದು, ಧರ್ಮದಿ ಧರೆಯ ಭಾರವನೂ।
ಪರಿದು, ಸತ್ಯದಿ ಮೆರೆದು, ಭಕ್ತರ
ಕರವಪಿಡಿದಾದರಿಸುವಾ ರಘು-
ವರನೆ, ಜಾನಕಿಯೊಡನೆ ಪಾಲಿಕೆ ನಮ್ಮನನವರತಾ ॥

[ಸಿದ್ಧಾಶ್ರಮಪ್ರಾಂತದಲ್ಲಿ ಗಗನಚಾರಿಗಳಾದ ಸಿದ್ಧಚಾರಣರ ಪ್ರವೇಶ]

ಸಿದ್ಧ :—ಆಹಾ! ಕೌಶಿಕನ ತಪಃಪ್ರಭಾವವೇ ಪ್ರಭಾವ! ಅಬ್ಬ! ಆತನಿಗೆ ತಿಳಿಯದ ಮಂತ್ರವಿಲ್ಲ, ತಂತ್ರವಿಲ್ಲ, ಸಕಲವಿದ್ಯೆಗಳೂ ಆತನಿಗೆ ಅಧೀನವೇಸರಿ!

ಚಾರಣ :—ಅದುಸರಿ, ಆ ಮಹಾತ್ಮರಿಗೆ ಭೃಶಾಶ್ವಪುತ್ರರು ಎಷ್ಟು ವಿಧೇಯರಾಗಿದ್ದಾರೆ!

ಸಿದ್ಧ :—ರಾಮಚಂದ್ರನ ವೀರ್ಯವೆಂತಹ ಘನತರವಾದುದು—ನೋಡಿದೆಯಾ? ಕೌಶಿಕನು ಅಸ್ತ್ರಗಳನ್ನು ಉಪದೇಶಿಸುವೆನೆಂದು ಹೇಳಿ, ಧ್ಯಾನಕ್ಕೆ ಕುಳಿತೊಡನೆಯೇ ಶಸ್ತ್ರಾಸ್ತ್ರಗಳ ಅಭಿಮಾನದೇವತೆಗಳಾದ ಆ ಭೃಶಾಶ್ವಪುತ್ರರು ಐವತ್ತುಮಂದಿಯೂ ಬಂದು ರಾಮಚಂದ್ರನಿಗೆ ಕೈಮುಗಿದು "ನಾವು ಕಿಂಕರರಾಗಿದ್ದೇವೆಂದು" ಶರಣಾಗತರಾದರು!

ಚಾರಣ :—ಆಶ್ಚರ್ಯವಾಶ್ಚರ್ಯವು! ರಾಮಚಂದ್ರನು ಒಮ್ಮೆ ಅವರನ್ನು ಕಟಾಕ್ಷಿಸಿ –'ನೀವೆಲ್ಲರೂ ನನ್ನ ಹೃದಯದಲ್ಲಿ ಪ್ರವೇಶಿಸಿ' ಎಂದು ಆಜ್ಞಾಪಿಸಿದ ಮಾತ್ರಕ್ಕೆ, ಅವರೆಲ್ಲರೂ ಎಷ್ಟು ಉತ್ಸಾಹದಿಂದ,

ತಮ್ಮ ತಮ್ಮ ತೇಜೋರೂಪಗಳಿಂದ ಆ ಮಹಾಪುರುಷನ ದೇಹದಲ್ಲಿ ಐಕ್ಯರಾದರು !

ಸಿದ್ಧ :—ಆಹಾ! ರಾಮಚಂದ್ರನ ವಿನಯವಾದರೂ ಎಷ್ಟು ಘನವಾದುದು! ಜಗತ್ತಿಗೇ ಆದರ್ಶವಾಗುವಂತೆ ಕೌಶಿಕನ ಬಳಿಯಲ್ಲಿ,— 'ಉಪಸಂಹಾರಮಂತ್ರಗಳನ್ನೂ ಉಪದೇಶಿಸಿ, ನನ್ನನ್ನು ಅನುಗ್ರಹಿಸಬೇಕು.' ಎಂದು ಪ್ರಾರ್ಥಿಸಿದುದು ಎಂತಹ ಸುಖದಾಯಕವು!

ಚಾರಣ :—ಆ ವಿನಯಕ್ಕೆ ತಕ್ಕಂತೆಯೇ ಅನುಗ್ರಹಬುದ್ಧಿಯೂ ಇರುವುದಲ್ಲವೇ? ಉಪಸಂಹಾರಮಂತ್ರೋಪದೇಶವಾದೊಡನೆ ಆ—ಆ ಅಸ್ತ್ರಾಭಿಮಾನಿ ದೇವತೆಗಳಾದ ಭೃಶಾಶ್ವನ ಮಕ್ಕಳು ಇನ್ನೂರ್ಯತ್ತು ಮುಂದಿಯೂ ಇದಿರೆ ಕೈಕಟ್ಟಿ ನಿಂತು,—'ಭೃತ್ಯರಿಗೆ ಆಜ್ಞಾಪಿಸಬೇಕು,' ಎಂದಾಗ, ರಾಮಚಂದ್ರನು 'ಆಗಲಿ, ನೀವು ಸ್ವೇಚ್ಛೆಯಿಂದಿದ್ದು, ನಾನು ಸ್ಮರಿಸಿದಾಗ ನನ್ನ ಬಳಿಗೆ ಬನ್ನಿರಿ,' ಎಂದು ಅದೆಷ್ಟು ಉದಾರತನದಿಂದ ಅನುಗ್ರಹಿಸಿದನು!

ಸಿದ್ಧ :—ಆಹಾ! ಆ ರಾಮನ ಸೋದರಸ್ನೇಹವಂತೂ ಅವರ್ಣನೀಯವೇಸರಿ! ತನಗೆ ಲಭ್ಯವಾದ ಸಕಲ ಶಸ್ತ್ರಾಸ್ತ್ರಗಳನ್ನೂ-ಗುರ್ವನುಜ್ಞೆಯಿಂದ-ತನ್ನ ಸೋದರನಿಗೂ ಉಪದೇಶಿಸಿದನು!

ಚಾರಣ :—ಲಕ್ಷ್ಮಣನ ಸೌಜನ್ಯವನ್ನೆಷ್ಟು ಕೊಂಡಾಡಿದರೂ ಸ್ವಲ್ಪವೇಸರಿ! ಮುಖ್ಯವಾಗಿ, ಸಾನುಜನಾದ ರಾಮಚಂದ್ರನಿಂದ ಲೋಕಭಯಂಕರಳಾದ ತಾಟಕಿಯ ಸಂಹಾರವಾಯ್ತು! ದೇವ—ಗೋ—ಭೂದ್ವಿಜರೆಲ್ಲರೂ ಹರ್ಷಿತರಾದರು!!

ಸಿದ್ಧ :—ಮಹಾವೀರ್ಯನೂ, ತ್ರಿಲೋಕವಿದಿತ ವಿಖ್ಯಾತನಾದ ವಿಶ್ವಾಮಿತ್ರನಿಂದ ಉಪದಿಷ್ಟವಾದ ಅಮೋಘತರ ಶಸ್ತ್ರಾಸ್ತ್ರಗಳುಳ್ಳವನೂ, ಶತ್ರುಭಯಂಕರನೂ ಆದ ರಾಮಚಂದ್ರನಿಂದ ಈ ಮಾರೀಚಾದಿ

ರಾಕ್ಷಸರ ನಿಗ್ರಹವೂ ಇಷ್ಟರಲ್ಲಿಯೇ ಆಗುವುದರಲ್ಲಿ ಸಂಶಯವೇನೂ ಇಲ್ಲ. ನಡೆ ಆ ಕೌಶಿಕಮುನಿಯ ಆಶ್ರಮದ ಬಳಿಯಲ್ಲಿ ನಡೆಯುವ ಕೌತುಕವನ್ನು ನೋಡುವ. [ಇಬ್ಬರೂ ಹೋಗುವರು.]

(ಸಿದ್ಧಾಶ್ರಮಪ್ರಾಂತದಲ್ಲಿ ಚಿಂತಾಕ್ರಾಂತನಾದ ಮಾರೀಚನ ಪ್ರವೇಶ)

ಮಾರೀಚ:—ಹಾ, ಇದೇನು! ಯಾವಾಗಲೂ ಇಲ್ಲದ ಅಪಶಕುನಗಳೂ, ಮನೋವ್ಯಾಕುಲವೂ ನನಗಿಂದು ಉಂಟಾಗಲು ಕಾರಣವೇನು? ಕೌಶಿಕನ ಯಜ್ಞವಿಧ್ವಂಸಮಾಡುವುದಕ್ಕಾಗಿ ಮಾತೆಯಿಂದಾಜ್ಞಪ್ತನಾಗಿ ಬಂದ ನನಗೆ, ಹೀಗಾದುದೇತರಿಂದ? (ಚಿಂತಿಸಿ) ಹಾ, ಏನಿದು, ಏನೋ ಹೃದಯತಲ್ಲಣವೂ, ಸಂಕಟವೂ ಉಂಟಾಗುತ್ತಿದೆ! ನಿಷ್ಕಾರಣವಾದ ಭೀತಿಯೂ ಹುಟ್ಟಿದೆ. ಯಾತರಿಂದ? ರಾಮಲಕ್ಷ್ಮಣರೊಡಗೂಡಿದ ವಿಶ್ವಾಮಿತ್ರನನ್ನು ಧ್ವಂಸಮಾಡಿ ಬರುತ್ತೇನೆಂದು ಹೇಳಿ ಹೋಗಿದ್ದ ನಮ್ಮ ತಾಯಿ, ಇಷ್ಟು ಹೊತ್ತಾದರೂ ಬರಲಿಲ್ಲವೇಕೆ? ಏನಾಗಿರಬಹುದು! ಸಂಗತಿಯರಿಯಲು ಹೋಗಿದ್ದ ನಮ್ಮ ಮಾವನೂ ಬರಲಿಲ್ಲವಲ್ಲಾ! (ಮುಂದಕ್ಕಡಿಯಿಟ್ಟು ಕಿವಿಕೊಟ್ಟು ಕೇಳಿ, ಬೆದರಿ—ಮೇಲೆ ನೋಡುತ್ತ) ಹಾ ಏನು—ಏನು; 'ಇನ್ನೂ ನಿನ್ನ ತಾಯಿ ಇರುವಳೇ?' (ರೋಷದಿಂದ)—ಎಲೆಲೆ, ಹೇಡಿಗಳೇ, ಮರೆಯಲ್ಲಿದ್ದು ಅಪಲಪಿಸುವ ಹೆಂಗುಳಿಗಳಾದ ವ್ಯೋಮಚಾರಿಗಳೇ! ಏನು ಹೇಳಿದಿರಿ? (ಹಲ್ಗಡಿದು ನೆಲದಮೇಲೆ ಕಾಲನ್ನು ಅಪ್ಪಳಿಸುವನು.)

(ಖಿನ್ನನಾದ ಸುಬಾಹುವಿನ ಪ್ರವೇಶ)

ಸುಬಾಹು:—॥ ಸ್ವಗತಂ ॥ ಕಷ್ಟಕಷ್ಟ! ಮಾರೀಚನ ಪರಿತಾಪವನ್ನು ನೋಡುವುದು ಕಡುಕಷ್ಟ! ತಾಯಿಯು ಸತ್ತಸುದ್ದಿಯನ್ನು ಕೇಳುವ ಮೊದಲೇ ಹಲುಬುವ ಇವನಿಗೆ, ನಿಜವನ್ನು ಹೇಗೆ ಹೇಳಲಿ? ॥ ಪ್ರಕಾಶಂ ॥ ಮಗನೇ! ಮಾರೀಚನೇ! ಹೇಡಿಗಳಾದ ವ್ಯೋಮಚಾರಿಗಳಲ್ಲಿ ಸಿಟ್ಟುಮಾಡಿ ಫಲವೇನು?

ಮಾರೀಚ :—ಯಾರದು? ಮಾವನೇ, ಬಂದೆಯಾ? ಇದೇನು— ಹೀಗೆ ಖಿನ್ನನಾಗಿರುವೆ? ನನ್ನ ತಾಯಿ ನನಗೆ ಏನು ಹೇಳಿದಳು?

ಸುಬಾಹು :—(ನಿಟ್ಟುಸಿರಿಟ್ಟು) ಮಗನೇ! ನಿನ್ನ ತಾಯಿ ನಿನಗೆ ಮತ್ತೇನೆನ್ನುವಳು? 'ಶೂರನಾದ ನೀನು ನಿನ್ನ ಮಾತೃಹತ್ಯಾಕಾರಿಯನ್ನು ಕೊಂದು, ನಿನ್ನ ಹಗೆಯನ್ನು ತೀರಿಸೆಂದು!'

ಮಾರೀಚ :—ಏನು ಏನು? ಮಾತೃಹತ್ಯಾಕಾರಿ! ಮಾವನೇ ಬಿಡಿಸಿ ಹೇಳು. ನನ್ನ ತಾಯಿ ಎಲ್ಲಿರುವಳು? ಏನೆಂದಳು? ಸಂಗತಿಯೇನು?

ಸುಬಾಹು :—ಇನ್ನೂ ನಿನ್ನ ತಾಯಿ ಇರುವಳೇ? ಹೋದಳು, ಮಗನೇ! ನಿನ್ನ ತಾಯಿ, ಮೃತ್ಯುಗರ್ಭವನ್ನು ಸೇರಿಹೋದಳು; ನಿನ್ನನ್ನು ವಂಚಿಸಿಬಿಟ್ಟು ಹೋದಳು! ನಮ್ಮೆಲ್ಲರ ಉತ್ಸಾಹಶಕ್ತಿಯನ್ನೂ ಕೊಂಡುಹೋದಳು.

ಮಾರೀಚ :—ಹಾ, ಅಯ್ಯೋ! ಅಮ್ಮಾ! (ಕುಕ್ಕರಿಸುವನು.)

ಸುಬಾಹು :—ಮಗನೇ! ಏಳು ಏಳು! ಶೂರನಾದ ನೀನು ಅಳುವದು ಸಲ್ಲದು! (ಎಬ್ಬಿಸುವನು)

ಮಾರೀಚ :—(ನಿಟ್ಟುಸಿರಿಟ್ಟು) ಮಾವನೇ! ಮಮತಾಳುವಾದ ಮಾತೆಯನ್ನು ಕಳೆದುಕೊಂಡೂ ಅಳದಿರುವೆನೆಂತು? ದುಃಖವನ್ನು ಹೇಗೆ ತಡೆಯಲಿ?

ಸುಬಾಹು :—ಮಗನೇ! ಶೂರನಾದವನು ತನ್ನ ಹಗೆಯನ್ನು ತೀರಿಸಿಕೊಳ್ಳುವುದರಿಂದ ದುಃಖವನ್ನು ಕಳೆಯಬೇಕು! ತನ್ನ ಪ್ರಿಯರಾದವರು ಮಾಡಿದ್ದ ಕೆಲಸವನ್ನು ಪೂರೈಸಿ, ಅವರ ಋಣವನ್ನು ತೀರಿಸಬೇಕು. ಅಳುವುದಿನ್ನು ಸಾಕು, ಕಲಿಯಾಗಿ ಕೈಗುಣವನ್ನು ತೋರಿಸಿನ್ನೇಳು!

ಮಾರೀಚ :—(ಎದ್ದುನಿಂತು) ಮಾವನೇ! ಮಾವನೇ! ಬೇಗನೆ ಹೇಳು! ನನ್ನ ಹೃದಯವು ತಲ್ಲಣಿಸುತ್ತಿದೆ! ಹಗೆಯನ್ನು ತೀರಿಸಲು ನನ್ನ

ಕರವಾಳವಿದೋ ಕುಣಿದಾಡುತ್ತಿದೆ, ತಡೆಯದೆ ಹೇಳು ; ಸಾವಿರ ಆನೆಗಳ ಬಲವುಳ್ಳವಳಾದ, ಲೋಕಭಯಂಕರಳಾದ ನನ್ನ ತಾಯಿಯನ್ನು, ರಾಕ್ಷಸರ ಗುಂಪಿಗೆಲ್ಲಾ ಅಭಿಮಾನಾಸ್ಪದೆಯಾದ ನನ್ನ ತಾಯಿಯನ್ನು ಕೊಂದವರಾರು? ಹೇಳು, ನನ್ನ ತಾಯಿಯನ್ನು ಕೊಂದ ದುಷ್ಟನಾರು? ಕೊಲ್ಲಲಿಕ್ಕೆ ಹೇಳಿದವನಾರು? ನಿಂತು ನೋಡುತ್ತಿದ್ದವನಾರು? ಎಲ್ಲವನ್ನೂ ಬೇಗಹೇಳು. [ಅ. ೩.]

ಸುಬಾಹು :—(ನಿಟ್ಟುಸಿರಿಟ್ಟು) ಅಲ್ಲಿ ನಿಂತುನೋಡುತ್ತಿದ್ದ ನಮ್ಮ ಚರರು ಹೀಗೆ ಹೇಳಿದರು. (ಅ. ೪.)

'ನಮ್ಮೆಲ್ಲರ ಉತ್ಸಾಹಭಂಗಮಾಡಿದವನೂ, ನಿನ್ನ ಭುಜಬಲವನ್ನು ಮುರಿದವನೂ—ಎಂದರೆ, ಅಜೇಯಳಾಗಿದ್ದ ನಿನ್ನ ತಾಯಿಯನ್ನು ಕೊಂದವನು—ಆ ದಶರಥರಾಮನೆಂಬವನು! ಸಹಾಯಮಾಡಿದವನು, ಅವನ ತಮ್ಮನು ; ಇದಿರೆ ನಿಂತು ಕೊಲ್ಲಿಸಿದವನು ಕೌಶಿಕನು!

ಮಾರೀಚ :—(ಖಡ್ಗವನ್ನು ಝಳಪಿಸುತ್ತ ರೋಷಾವೇಶದಿಂದ ಗಿರಗಿರನೆ ತಿರುಗಿ ಪುಟನೆಗೆದು ನಿಂತು ಹಲ್ಗಡಿದು—ನೆಲವನ್ನು ದಟ್ಟಿಸಿ) [ಅ. ೫.]

'ಎಲೆಲೆ ಮೂಢರೇ! ಮೋಸದಿಂದ ನಮ್ಮ ತಾಯಿಯನ್ನು ಕೊಂದ—ಕೊಲ್ಲಿಸಿದ ಖಲರೇ! ಇರಲಿ, ಈ ಖಡ್ಗದಿಂದಲೇ ನಿಮ್ಮೆಲ್ಲರನ್ನೂ ಖಂಡತುಂಡಾಗಿ ಖಂಡಿಸಿ ರಣಹದ್ದುಗಳಿಗೆ ಔತನಮಾಡಿ ನನ್ನೀ ಮನದಳಲನ್ನು ನೀಗಿಸುವೆನು. [ಪಕ್ಕಕ್ಕೆ ತಿರುಗಿ] ಮಾವನೇ! ಹೇಳು, ಅವರೆಲ್ಲರೂ ಎಲ್ಲಿಗೆ ಹೋದರು, ಈಗ ಏನುಮಾಡುತ್ತಿರುವರು? ಈ ಕ್ಷಣದಲ್ಲಿ ಅವರನ್ನು ನಿಗ್ರಹಿಸಿ ಬರುವೆನು.

ಸುಬಾಹು :—ಮಗನೇ! ಶೋಕರೋಷಗಳಿಂದ ದುಡುಕಿ ಕಾರ್ಯವನ್ನು ಕೆಡಿಸಿಕೊಳ್ಳಬೇಡ. ನಾವೀಗಲೇ ಅವರ ಇದಿರಾಗಬಾರದು!

ಆ ಕೌಶಿಕನು ಪ್ರಶಸ್ತನಾಗಿರುವನು. ಯಜ್ಞವು ನಡೆಯುತ್ತಿರುವುದು ನಾವು ಮರೆಯಲ್ಲಿ ಸಮಯವನ್ನು ಕಾದಿದ್ದು, ಯಜ್ಞವು ಮುಗಿಯುತ್ತ ಬಂತೆಂದು ಅವರೆಲ್ಲರೂ ಸಂಭ್ರಮದಲ್ಲಿರುವಾಗ ಒಟ್ಟಾಗಿಹೋಗಿ ಎಲ್ಲ ರನ್ನೂ ಧ್ವಂಸಮಾಡಿಬಿಡಬೇಕು.

ಮಾರೀಚ :—ಹಾಗಾದರೆ, ಮಾವನೇ ! ನಡೆ, ನಮ್ಮ ರಾಕ್ಷಸ ರೆಲ್ಲರನ್ನೂ ಗುಂಪುಕೂಡಿಸಿಕೊಂಡು ಕೌಶಿಕನ ಯಾಗಶಾಲೆಯ ಒಳಗೆ ಹೋಗುವ.

ಸುಬಾಹು :—ಶೂರನಾದ ನಿನಗೆ, ಇದೀಗ ಒಪ್ಪತಕ್ಕಮಾತು ! ನಡೆ, ಹೋಗುವ. (ಇಬ್ಬರೂ ಹೊರಡುವರು )

(ವಿಶ್ವಾಮಿತ್ರನ ಆಶ್ರಮದ್ವಾರ ಪ್ರದೇಶದಲ್ಲಿ ಶಿಷ್ಯರಪ್ರವೇಶ)

೧ ನೇ ಶಿಷ್ಯ :—ಗಾಲವ, ಕಂಕ, ದಾಲ್ಭ್ಯ ! ಈವರೆಗೆ ನೀವೇನು ಮಾಡಿದಿರಿ ?

೨ ನೇ ಗಾಲವ :—ಏನಯ್ಯಾ, ನಕ್ಷತ್ರಿಕ ! ಏನೂ ತಿಳಿಯದ ವನಂತೆ ಕೇಳುವೆ ! ನನಗೆ ಗುರುಗಳು ಮೊದಲೇ ಆಜ್ಞಾಪಿಸಿದ್ದಂತೆ ಬಹು ದೂರದಿಂದ ಬಂದು-ಬರುತ್ತಿರುವ ಮಹರ್ಷಿಗಳನ್ನೆಲ್ಲಾ ಕರೆದುಕೊಂಡು ಬಂದು, ಯಜ್ಞಶಾಲೆಯಲ್ಲಿ ಅವರಿಗೆ ಕುಳಿತುಕೊಳ್ಳಲು ಸ್ಥಳವನ್ನೇರ್ಪಡಿ ಸಿಕೊಡುವುದರಲ್ಲಿಯೂ, ಹೋಮದ್ರವ್ಯವನ್ನೊದಗಿಸುವುದರಲ್ಲಿಯೂ ತತ್ಪರನಾಗಿದ್ದೆ.

೩ ನೇ ಕಂಕ :—ನಾನಂತೂ ಯಜ್ಞವನ್ನು ನೋಡುವುದಕ್ಕೂ ದಕ್ಷಿಣಾತಾಂಬೂಲಗಳನ್ನು ಪಡೆಯಲಿಕ್ಕೂ ಬಂದು-ಬರುತ್ತಿರುವ ಬ್ರಾಹ್ಮಣರಿಗೆ ಸತ್ಕಾರ, ದಾನದಕ್ಷಿಣೆಗಳನ್ನು ಕೊಡತೊಡಗಿದ್ದೆ.

೧ ನೇ ದಾಲ್ಭ್ಯ :—ನಾನು ಆಶ್ರಮದ ಹೊರಗೆ ನೋಡುವುದರ ಲ್ಲಿಯೂ, ಗೋವುಗಳ ರಕ್ಷಣೆಯಲ್ಲಿಯೂ ನಿರತನಾಗಿದ್ದೆ. ನೀನೇನು ಮಾಡುತ್ತಲಿದ್ದೆ ?

೧ ನೇ ನಕ್ಷತ್ರಿಕ :—ನಾನು ಎಲ್ಲಾ ಕಡೆಯಲ್ಲಿಯೂ ಕಾರ್ಯ ಪ್ರೋತ್ಸಾಹಕನಾಗಿದ್ದೆ; ವಿಶೇಷವಾಗಿ, ಗುರುಗಳ ಬಳಿಯಲ್ಲಿಯೇ ನಿಂತಿರುತ್ತಿದ್ದೆ.

ದಾಲ್ಭ್ಯ :—ಅದುಸರಿ, ಗುರುಗಳು ಮಾತನಾಡುವುದಾವಾಗ ? ಈಷ್ಟು ದಿನಗಳ ವ್ರತ ?

ಗಾಲವ :—ಇದು ಏಳುದಿನಗಳ ವ್ರತವಿರಬೇಕು. ಗುರುಗಳು ದೀಕ್ಷೆಯನ್ನು ವಹಿಸಿ ಆರು ರಾತ್ರಿ ಕಳೆದುಹೋದುವು. ಈ ದಿನವೇ ವ್ರತಸಮಾಪ್ತಿಯಾಗಿ ಯಜ್ಞವು ಸಾಂಗವೆನ್ನಿಸಬೇಕು.

ನಕ್ಷ :—ಎಲೈ, ನಿನಗೆ ಯಾರು ಹೇಳಿದರು ?

ಗಾಲವ :—ಇಂದಿಗೆ ಆರು ದಿನಗಳ ಹಿಂದೆ, ಎಂದರೆ, ಗುರುಗಳು ದೀಕ್ಷೆಯನ್ನುವಹಿಸಿದ ಮರುದಿನ, ರಾಮಲಕ್ಷ್ಮಣರಿಗೆ ಮಹರ್ಷಿಗಳೆಲ್ಲರೂ ಆಜ್ಞಾಪಿಸಿದುದರಿಂದ ತಿಳಿದೆನು.

ನಕ್ಷ :—ಏನೆಂದು ?

ಗಾಲವ :—ರಾಮಲಕ್ಷ್ಮಣರುಮಾರರು ಬಂದು- ‘ ಮಾರೀಚಾದಿ ರಾಕ್ಷಸರು ಯಾವಾಗಬರುವರು; ಅವರನ್ನು ಯಾವ ಉಪಾಯದಿಂದ ನಿಗ್ರಹಿಸಬೇಕು.’ ಎಂದು ಕೇಳಿದರು. ನಮ್ಮ ಗುರುಗಳು ವ್ರತಸ್ಥರಾಗಿದ್ದುದರಿಂದ ಮಹರ್ಷಿಗಳು- ‘ ವಿಶ್ವಾಮಿತ್ರರು ಇನ್ನು ಆರು ದಿನಗಳವರೆಗೆಮಾತನಾಡುವುದಿಲ್ಲ. ಆರನೆಯ ದಿನವೇ ವ್ರತಸಮಾಪ್ತಿಯಾಗಬೇಕು. ನೀವಿಬ್ಬರೂ ಆರು ದಿನಗಳವರೆಗೆ ಜಾಗರೂಕರಾಗಿದ್ದು ಯಜ್ಞವಿಘ್ನಕಾರಿಗಳಾಗಿ ಬರುವ ರಕ್ಕಸರನ್ನು ನಿಗ್ರಹಿಸಬೇಕು-’ ಎಂದು ಕಟ್ಟುಮಾಡಿದರು.

ನಕ್ಷ :—(ನಕ್ಕು) ಮಹಾನುಭಾವರಾದ ರಾಮಲಕ್ಷ್ಮಣರ ಹೆಸರನ್ನು ಕೇಳಿಯೇ ಆ ರಾಕ್ಷಸರು ಹತರಾಗಿ ಹೋಗಿರಬಹುದೋ

ಹೇಗೋ ! ಇಲ್ಲದಿದ್ದರೆ ಯಜ್ಞಸಮಾಪ್ತಿಯಾಗುತ್ತ ಬಂದರೂ ಅವರ ಸುಳಿವೇ ಇಲ್ಲದಿರುವುದೇ ? ರಾಮನ ಶೌರ್ಯವೇ ಶೌರ್ಯ, [ಅ ೬.]

ಕಂಕ :—ರಾಮನ ಪರಾಕ್ರಮವೇ ಅಂತಹದಿರಬೇಕು. [ಕಿವಿಗೊಟ್ಟು ಕೇಳಿ] ಏನಿದು ? ಯಾಗಶಾಲೆಯ ಕಡೆಯೇನೋ ಗದ್ದಲವಾಗುತ್ತಲಿದೆ.

ನಕ್ಷ :—ಹಾಗೆಂದರೇನು ? ನೋಡಿಬರುವೆನು. (ಹೋಗಿ ಮತ್ತೆ ಓಡಿ ಬರುವನು.)

ಗಾಲವ :—ಏನದು ಗದ್ದಲ ?

ನಕ್ಷ :—ಏನೋ ಉತ್ಪಾತ ಸೂಚನೆಯಾಗಿದೆಯೆಂದೂ ರಾಕ್ಷಸರ ಭಯವುಂಟೆಂದೂ ಅಲ್ಲಿರುವ ಮಹರ್ಷಿಗಳೆಲ್ಲಾ ಗಾಬರಿಗೊಂಡಿದ್ದಾರೆ

ಗಾಲವ :—ಉತ್ಪಾತ ಸೂಚನೆಯಾವುದು ?

ನಕ್ಷ :—ಯಜ್ಞವೇದಿಕೆಯಲ್ಲಿ ಜ್ವಾಲೆಯು ಅತ್ಯಧಿಕವಾಗಿ, ದರ್ಭೆ-ಸಮಿತ್ತುಗಳೂ, ಪಾನಪಾತ್ರ-ಹೋಮಪಾತ್ರಗಳೂ ಸಹ ಉರಿಯುತ್ತಿರುವುವು !

ಕಂಕ :—ಅದು, ಉತ್ಪಾತ ಸೂಚನೆಯೇ ?

ನಕ್ಷ :—ರಾಕ್ಷಸರ ಬರುವಿಕೆಯನ್ನು ಸೂಚಿಸುವ ಶಕುನವಂತೆ !

ಗಾಲವ :—(ಕಿವಿಕೊಟ್ಟು ಕೇಳಿ) ಹೋ ! ಅದೋ ನೋಡಲ್ಲಿ ? ಕೆಂದೂಳಿಯೊಡನೆ ಗಾಳಿಯೆಷ್ಟು ಬಲವಾಗಿ ಬೀಸುತ್ತದೆ. ಮೋಡವು ಕಾಣಿಸಿಕೊಂಡಿದೆ. ಹಾ-ಹಾ-ಕೇಳಲ್ಲಿ, ಭಯಂಕರ ಅಟ್ಟಹಾಸವು ಕೇಳಿಸುತ್ತಿದೆ.

(ಎಲ್ಲರೂ ಶ್ವಾಸಬಂಧಮಾಡಿ ನಾಲ್ಕು ಕಡೆಯನ್ನೂ ನೋಡುವರು)

ಗಾಲವ :—ನಡೆಯಿರಿ, ನಾವೂ ಗುರುಗಳ ಬಳಿಯಲ್ಲಿದ್ದು, ರಾಮಲಕ್ಷ್ಮಣಕುಮಾರರಿಂದ ರಕ್ಷಿತರಾಗುವ. (ನಾಲ್ವರೂ ಯಾಗ ಶಾಲೆಗೆ ಹೊರಡುವರು.)

(ಯಾಗಶಾಲೆಯಲ್ಲಿ ಋತ್ವಿಕ್, ಪುರೋಹಿತರೇ ಮೊದಲಾದ ತಪಸ್ವಿ ಗಳೊಡನೆ ಯಜ್ಞವೇದಿಕೆಯ ಮುಂದೆ ವಿಶ್ವಾಮಿತ್ರನು ಕುಳಿತಿರು ವನು. ರಾಮಲಕ್ಷ್ಮಣರು ದ್ವಾರದ ಬಳಿ ಧನುರ್ಧರರಾಗಿ ನಿಂತು ನೋಡುತ್ತಿರುವರು. ಶಿಷ್ಯರು ಓಡಿಬರುವರು.)

ಶಿಷ್ಯರು :—ಕಾಪಾಡು, ಕಾಪಾಡು, ರಾಮಚಂದ್ರನೇ! ಕಾಪಾ ಡು ! ರಾಕ್ಷಸರ ಅಟ್ಟಹಾಸ.

ತೆರೆಯ ಕಡೆ ದೂರದಿಂದ—“ ನಾವಿನ್ನೂ ಜೀವಿಸಿರುವಾಗ ಯಜ್ಞ ವನ್ನು ಮಾಡುವರಾರು ? ” [ಗುಡುಗು ಮಿಂಚುಗಳೊಡನೆ ಕಾರ್ಮೋ ಡವು ಕವಿವುದು ; ಮುಹೂರ್ತದ ಕಲಕಲದೊಡನೆ ಯಜ್ಞವೇದಿಕೆಯ ಬಳಿ ಯಲ್ಲಿ ರಕ್ತವರ್ಷಣವಾಗುವುದು ]

ಋಷಿಗಳೆಲ್ಲರೂ (ಭಯದಿಂದ) ರಕ್ಷಿಸು, ರಕ್ಷಿಸು ! ರಾಮ ಚಂದ್ರಾ ! ಯಜ್ಞವನ್ನು ರಕ್ಷಿಸು ! ಸಾನುಜನಾಗಿ ನಿಂತು, ದುಷ್ಟನಿಗ್ರಹ ಪೂರ್ವಕವಾಗಿ ಶಿಷ್ಯರನ್ನು ಸಂರಕ್ಷಿಸು.

ರಾಮ :—ಹೆದರಬೇಡಿರಿ, ಹೆದರಬೇಡಿರಿ. (ಲಕ್ಷ್ಮಣನನ್ನು ಕುರಿತು) ವತ್ಸ ! ಜಾಗರೂಕನಾಗಿರು. (ಇಬ್ಬರೂ ಧನುಷ್ಟಂಕಾರವಮಾ ಡುವರು.)

(ತೆರೆಯ ಕಡೆ ವಿಕೃತಾಟ್ಟಹಾಸವಾಗುವುದು.)

ರಾಮ :—(ಬಿಲ್ಲನ್ನು ಮೇಲಕ್ಕೆತ್ತಿ ನೇವರಿಸುತ್ತ-ದರ್ಪದಿಂದ) ನೀಚರೇ ! ದುರಾತ್ಮರೇ ! ಹಾರಾಡದೆ ನಿಲ್ಲಿರಿ ! ಕ್ಷಣಮಾತ್ರದಲ್ಲಿ ನಿಮ್ಮೆಲ್ಲರನ್ನೂ ಮೃತ್ಯುಮುಖಕ್ಕೆ ಕಳುಹುವೆನು.

ತೆರೆಯಲ್ಲಿ :—(ಭಯಂಕರಾಟ್ಟಹಾಸದಿಂದ) ಯಾರೆಲೆ, ಒಲಗರ್ವಿತನಾದ ಬಾಲನೇ! ಬಂದೆವು ನಿಲ್ಲು-ಕ್ಷಣಮಾತ್ರ ನಿಲ್ಲು! (ಶಿಲಾವರ್ಷವಾಗುವುದು )

ಋಷಿಗಳು :—(ಕೈಮೇಲಕ್ಕೆತ್ತಿ) ರಾಮಾ ! ಲಕ್ಷ್ಮಣಾ ! ಕಾಪಾಡಿ ! ಕಾಪಾಡಿ !! ಯಜ್ಞವಿಘ್ನಕಾರಿಗಳಾದಿವರಲ್ಲಿ ಕನಿಕರವಿಡದೆ, ಲೋಕಕ್ಷೇಮವುಂಟಾಗುವಂತೆ ಮಾಡಿರಿ [ಅ. ಲ.]

ರಾಮ :—ವತ್ಸ, ಲಕ್ಷ್ಮಣ ! ಆ ಕ್ರೂರ ರಾಕ್ಷಸರನ್ನು ಅಲ್ಲಿಯೇ ತಡೆದು ನಿಗ್ರಹಿಸುವ ; ಬಾ (ಋಷಿಗಳಕಡೆಗೆ ತಿರುಗಿ) ಪೂಜ್ಯರೇ ! ಆ ದುರಾತ್ಮರನ್ನಿಲ್ಲಿಗೆ ಬರಗೊಡದೆ, ಅಲ್ಲಿಯೇ ನಿಗ್ರಹಿಸಿ ಬರುವೆವು. ಧೈರ್ಯವಾಗಿರಿ ! (ರಾಮಲಕ್ಷ್ಮಣರು ಮುಂದೆ ಬರುವರು )

(ಯಾಗಶಾಲೆಯ ಹೊರಗಡೆಯಲ್ಲಿ ಧನುಷ್ಪಾಣಿಗಳಾದ
ರಾಮಲಕ್ಷ್ಮಣರು ಬರುವರು )

ರಾಮ :—(ತೆರೆಯ ಕಡೆ ಕೈನೀಡಿ) ವತ್ಸಾ ! ಲಕ್ಷ್ಮಣಾ ! ನೋಡಲ್ಲಿ. ರಾಕ್ಷಸರ ಮಾಯೆಯನ್ನೆಲ್ಲಾ ಈ ಕ್ಷಣದಲ್ಲಿ ಹೋಗಲಾಡಿಸುವೆನು. (ಬಾಣಪ್ರಯೋಗಮಾಡುವನು.)

(ಮೋಡವು ಚದರಿ ಎಲ್ಲಾ ಕಡೆಯಲ್ಲಿಯೂ ಪ್ರಕಾಶವಾಗುವುದು)

|| ತೆರೆಯಲ್ಲಿ || (ಘರ್ಜನೆಯಿಂದ) ಎಲೆಶಿ, ದಶರಥಪುತ್ರನೆ ! ರಾಮನೆಂಬ ಸರನೆ ! ನನ್ನ ತಾಯಿಯನ್ನು ಕೊಂದ ನಿನ್ನನ್ನು ಈ ಕ್ಷಣದಲ್ಲಿ ಕೊಂದು, ನನ್ನ ಹಗೆಯನ್ನು ತೀರಿಸುವೆನು. ಓಡಿಹೋಗದೆ, ನಿಲ್ಲು. ಒಮ್ಮೆ ನಿನ್ನ ಇಷ್ಟದೈವಕ್ಕೆ ಕೈಮುಗಿದು ನಿಲ್ಲು. (ಅ. ೧೯.)

ರಾಮ :—(ನಕ್ಕು) ಮೂರ್ಖನೆ ! ನನ್ನ ಇಷ್ಟದೈವವೆಂದರೆ, ಈ ಮಹಾತ್ಮರ ಆಜ್ಞೆಯೇ! ಅದನ್ನು ಸ್ಮರಿಸಿ ಇದೋ ನಿಂತಿರುವೆನು. ನೋಡಿದೋ-ಉನ್ಮತ್ತನಾದ ದಾನವನೇ! ಈ ಮಹಾಸ್ತ್ರವು ನಿನ್ನನ್ನು ಜಲ

ದಲ್ಲಿ ಮುಳಗಿಸುವುದು. ಎಚ್ಚರಿಕೆಯಿಂದ ನಿಂತು, ಕಲಿಯಾದರೆ ಉಳಿದುಕೋ. (ಅ. ೧೧.) (ಬಾಣಪ್ರಯೋಗ ಮಾಡುವನು.)

|| ತೆರೆಯಲ್ಲಿ || (ಕೋಲಾಹಲ) -ಹೋದನು-ಮಾರೀಚನು ಅಪಹೃತನಾಗಿ ಆಕಾಶದಲ್ಲಿ ಗಾಳಿಯೊಡನೆ ತೂರಿಹೋದನು ! !

ರಾಮ :—ಲಕ್ಷ್ಮಣ ! ನೋಡಿದೆಯಾ ! ಮಂತ್ರಪೂತವಾಗಿ ನನ್ನಿಂದ ಬಿಡಲ್ಪಟ್ಟ ಮಾನವಾಸ್ತ್ರವು ಮಾರೀಚನನ್ನು ಬಹುದೂರ ಕೊಯ್ಯುಕೊಂಡು ಹೋಯಿತು.

|| ತೆರೆಯಲ್ಲಿ || (ಮತ್ತೆ ಕೋಲಾಹಲ)

ಲಕ್ಷ್ಮಣ :—ಆರ್ಯನೇ ! ಮಾರೀಚನ ದರ್ಪವನ್ನು ಮುರಿದುದಾಯ್ತು ! ಇನ್ನು ಈ ಕ್ಷುದ್ರ ರಕ್ಕಸರನ್ನೆಲ್ಲಾ ಧ್ವಂಸಮಾಡಿ ಬಿಡಬೇಕು ! (ಬಾಣವನ್ನು ಬಿಡುವನು)

ರಾಮ :—ಲಕ್ಷ್ಮಣ ! ನಿನ್ನ ಬಾಣದಿಂದ ರಕ್ಕಸರು ಜರ್ಝರಿತಗಾತ್ರರಾದರು. ಇನ್ನು ಇವರನ್ನು ನನ್ನ ವಾಯುವ್ಯಾಸ್ತ್ರದಿಂದ ಗಾಸುಗಳನ್ನಾಗಿ ಮಾಡುವೆನು. (ಬಾಣವನ್ನು ಬಿಡುವನು)

(ತೆರೆಯಕಡೆ ಮಹಚ್ಛಬ್ದವಾಗುವುದು. ಕ್ರೋಧಾಮರ್ಷನಾದ ಸುಬಾಹು ಪ್ರವೇಶಿಸುವನು )

ಸುಬಾಹು :—(ಹಲ್ಗಡಿದು) ಯಾರೆಲಾ ರಾಮನೆಂಬವನು ! ತಾಟಕಿಯನ್ನು ಕೊಂದು, ಮಾರೀಚನನ್ನು ದೂರಕ್ಕೋಡಿಸಿದೆನೆಂಬ ಕೆಚ್ಚಿನವನಾವನು ! (ಅ. ೧೨.)

ಲಕ್ಷ್ಮಣ :—(ಧನುಸ್ಸಿನ ತುದಿಯಿಂದ ತಿವಿದು ದರ್ಪದಿಂದ) ಎಲಾ ಮೂಢನೇ ! ತಾಟಕಾಂತಕನೂ, ಮಾರೀಚಾದಿ ರಕ್ಕಸವೈರಿಯೂ ಆದ ರಾಮಚಂದ್ರನು ಇಲ್ಲಿರುವನು ; ನೋಡು. ಕ್ಷಣಮಾತ್ರದಲ್ಲಿ ನಿನ್ನ ದೇಹವನ್ನೀಡಾಡು. (ಅ. ೧೩.)

ಸುಬಾಹು :—ಎಲೆಲೆ, ಬಲಗರ್ವಿತನಾದ ಬಾಲನೇ ! ನಿಲ್ಲು, ಕದಲದೆ ಸರಿಯಾಗಿ ನಿಲ್ಲು. ಒಂದೇ ಬಾರಿಗೆ ನಿನ್ನನ್ನು ಅಪ್ಪಳಿಸಿಬಿಡುವೆನು. (ಅ. ೧೪.)

ರಾಮ :—(ಧನುಷ್ಟಂಕಾರಮಾಡುತ್ತ) ಎಲೆ ಮದಾಂಧನೇ ! ನೀಚನೇ ! ಕುಲಪಾಂಸನೆ ! ದಾನವಾಧಮನೇ ! ಏನುಮಾಡುವೆಯೋ ಮಾಡು; ಬಾ. ನಿನ್ನ ತೋಳಬಲವನ್ನು ಈಗ ನೋಡುತ್ತೇನೆ. (ಅ. ೧೫.)

ಸುಬಾಹು :—ನೋಡು, ನೋಡು. ಒಂದೇ ಬಾರಿಗೆ ಈ ಮುಷ್ಟಿಯಿಂದ ನಿನ್ನ ತಲೆಯನ್ನು ಕುಟ್ಟಿ, ಆ ಬಳಿಕ ನಿನ್ನ ತಮ್ಮನನ್ನು ಮೆಟ್ಟಿ ಹಾಕುವೆನು. (ಅ. ೧೪.) (ಮುಂದೆ ಬರುವನು.)

ಲಕ್ಷ್ಮಣ :—(ಧನುಸ್ಸಿನಿಂದ ಅಡ್ಡಗಟ್ಟಿ ತಡೆಯುವನು.)

ರಾಮ :—(ಕ್ರೋಧದಿಂದ) ನೀಚನೆ, ಇನ್ನು ನಿನ್ನಲ್ಲಿ ಕನಿಕರವು ಸಾಕು-ಈ ಕ್ಷಣದಲ್ಲಿ ಈ ಆಗ್ನೇಯಾಸ್ತ್ರದಿಂದ ನಿನ್ನನ್ನೂ ನಿನ್ನ ಅಕ್ಕನ ಬಳಿಗೆ ಕಳುಹುವೆನು, ನಿಲ್ಲು.

(ಧನುಸ್ಸಿಗೆ ಹೆದೆಯನ್ನೇರಿಸುವನು)

ಸುಬಾಹು :—|| ಸ್ವಗತಂ || ಕಾಲವು ನನಗೆ ಪ್ರತಿಕೂಲವಾಗಿದೆ ! ತಾಟಕಿಯು ಹೋದಳು. ರಾಕ್ಷಸಪಡೆಯೂ ನಾಶವಾಯಿತು. ಮಾರೀಚನಗತಿಯೇನಾಯ್ತೋ ತಿಳಿಯದು. ಈತನ ಈ ಕ್ರೋಧವನ್ನು ನೋಡಿ, ಈ ನನ್ನ ಹೃದಯವು ಕಂಪಿಸುವುದು. ಇವರಾರೋ ಸಾಮಾನ್ಯ ಬಾಲರಾಗಿಲ್ಲ. ನಾನಿನ್ನು ಮಾಯೆಯಿಂದಲಾದರೂ ಪ್ರಾಣವನ್ನುಳಿಸಿಕೊಂಡು ಹೋಗಬೇಕು. || ಪ್ರಕಾಶಂ || (ಮರೆಯಾಗುವನು )

ಲಕ್ಷ್ಮಣ :—ಆರ್ಯನೆ, ಸುಬಾಹು ಮಾಯವಾದನು.

ರಾಮ :—ಅನುಜಾತ ! ಆತನು ಎಲ್ಲಿ ಅಡಗಿದರೂ-ಪಾತಾಳವನ್ನು ಹೊಕ್ಕರೂ ಈ ಆಗ್ನೇಯಾಸ್ತ್ರವು ಅವನನ್ನು ಸುಟ್ಟು ಹಾಕದೆ

ಬಿಡುವದಿಲ್ಲ. (ತೆರೆಯುಕಡೆ ನೋಡಿ) (ಅ. ೧೫ ) ದಾನವಾಧಮನೇ ! ಇದೋ ! ಈ ಬಾಣದಿಂದ ನೀನೀಕ್ಷಣ ಭಸ್ಮವಾಗಿ ಹೋಗುವೆ ! ಇನ್ನು ನೀನು ಶಿವಭವರನ್ನು ಮರೆಹೊಕ್ಕರೂ ನಿನ್ನನ್ನು ಬಿಡುವುದಿಲ್ಲ. (ಬಾಣವನ್ನು ಬಿಡುವನು. ತೆರೆಯಲ್ಲಿ ಮಹಚ್ಛಬ್ದವಾಗುವುದು.)

(ಗಗನದಲ್ಲಿ) ದೇವದುಂದುಭಿಗಳೊಡನೆ ಪುಷ್ಪವೃಷ್ಟಿಯಾಗುವುದು.

(ಶಿಷ್ಯರು ಬಂದು)-‹ ರಾಮಚಂದ್ರನೇ ! ವ್ರತಸಾಂಗವಾಯಿತು. ಪೂಜ್ಯರು, ಜಯಶಾಲಿಯಾದ ನಿನ್ನನ್ನು ಯಜ್ಞವೇದಿಯ ಬಳಿಗೆ ಬರಲು ಅಪೇಕ್ಷಿಸುವರು.

ರಾಮ :—ಅನುಜಾತ ! ನಡೆ ! ಕೃತಕಾರ್ಯರಾಗಿರುವ ಪೂಜ್ಯರನ್ನು ನಮಸ್ಕರಿಸುವ (ಮುಂದೆ ಬರುವರು.)

(ಯಾಗಶಾಲೆಯಲ್ಲಿ ಪೂರ್ಣಾಹುತಿಯಾಗುತ್ತಿರುವುದು. ವಿಶ್ವಾಮಿತ್ರನು ದೇವತೆಗಳಿಗೆ ಮಂತ್ರಪೂರ್ವಕ ಹವಿರ್ಭಾಗವನ್ನು ಸಲ್ಲಿಸುತ್ತಲಿರುವನು.)

|| ಗಗನದಲ್ಲಿ || ಎಲೈ, ವಿಶ್ವಾಮಿತ್ರ ಮುನಿಯೇ ! ನಿನ್ನಿಂದ ಜಗತ್ತೇ ಉಪಕೃತವಾಯಿತು. ನಿನ್ನ ಯಜ್ಞವು ಮಹತ್ಫಲದಾಯಕವಾದುದಾಗಲಿ ! ನಾವು ಸಂತೋಷದಿಂದ ಹವಿರ್ಭಾಗವನ್ನು ಸ್ವೀಕರಿಸಿದೆವು.

(ಋಷಿಗಳೆಲ್ಲರೂ ಎದ್ದು ನಿಂತು ಕೈ ಮೇಲಕ್ಕೆತ್ತಿ ವೇದಘೋಷ ಮಾಡುವರು.)

|| ಗಗನದಲ್ಲಿ || (ಅ. ೧೬.) ರಾಮನೇ ! ಲೋಕಾಭಿರಾಮನೇ ! ಸುಗುಣಾರಾಮನೇ ! ಭೀಮ ಪರಾಕ್ರಮನಾದ, ಶರಣಾಗತವತ್ಸಲನಾದ, ಸಾನುಜನಾದ ನಿನಗೆ ವಿಜಯವಾಗಲಿ. (ಮತ್ತೆ ದೇವದುಂದುಭಿಯೊಡನೆ ಪುಷ್ಪವೃಷ್ಟಿಯಾಗುವುದು )

ವಿಶ್ವಾಮಿತ್ರ :—ಎದ್ದು ಮುಂದೆ ಬರುವನು.

ರಾಮ
ಲಕ್ಷ್ಮಣ } :—(ವಿನಯದಿಂದ) ಕೃತಾರ್ಥರಾದ ಮಹಾತ್ಮರಿಗೆ ನಮಸ್ಕರಿಸುವೆವು.

ವಿಶ್ವಾ :—ಎಲೈ, ಮಹಾಪುರುಷನಾದ ರಾಮಚಂದ್ರನೇ ! ನಿನ್ನಿಂದ ದುಷ್ಟನಿಗ್ರಹಪೂರ್ವಕವಾಗಿ ಶಿಷ್ಟಪರಿಪಾಲನ ಕಾರ್ಯವು ಸಮರ್ಪಕವಾಗಿ ನಡೆಯಿತು ನಾನೂ ನಿನ್ನ ಸಹಾಯದಿಂದ ಕೃತಾರ್ಥನಾದೆನು ಈ ಸಿದ್ಧಾಶ್ರಮವೂ ಸಾರ್ಥಕನಾಮವುಳ್ಳದ್ದಾಯಿತು. ಇನ್ನು ಅವಭೃತಸ್ನಾನವಮಾಡಿದ ಬಳಿಕ, ನಿಮ್ಮನ್ನು ಬೀಳ್ಕೊಡುವೆನು.

ಋಷಿಗಳು :—ಎಲೈ, ಲೋಕಮಾನ್ಯರಾದ ವಿಶ್ವಾಮಿತ್ರರೇ ತಮ್ಮಿಂದ ನಾವೆಲ್ಲರೂ ಉಪಕೃತರಾಗಿರುವೆವು. ಈ ಮಹಾನುಭಾವರಾದ ರಾಮಲಕ್ಷ್ಮಣರಿಂದ ತಾವು ಇನ್ನೂ ಅನೇಕ ಕಾರ್ಯಗಳನ್ನು ನಡೆಯಿಸಬೇಕೆಂದು ಪ್ರಾರ್ಥಿಸುತ್ತೇವೆ.

(ರಾಮನನ್ನು ಕುರಿತು)

ರಾಮಚಂದ್ರನೇ ! ಮಹಾತ್ಮನಾದ ಜನಕಮಹಾರಾಜನು ಯಾಗವನ್ನು ಮಾಡುತ್ತಿರುವನು. ಅದನ್ನು ನೋಡುವುದಕ್ಕೂ ಆತನಲ್ಲಿರುವ 'ಸುನಾಭ' ವೆಂಬ ಶೈವಧನುಸ್ಸನ್ನು ನೀನು ಪರೀಕ್ಷಿಸುವುದಕ್ಕೂ ಅಪೇಕ್ಷಿಸುವೆವು. ನಿಮ್ಮ ದರ್ಶನೋತ್ಸವಕ್ಕಾಗಿ ಬಹುಜನರು ಕಾದಿರುವುದರಿಂದ ಅಲ್ಲಿಗೆ ನೀವಿಬ್ಬರೂ ಬರಬೇಕು.

ರಾಮ
ಲಕ್ಷ್ಮಣ } :—ತಪೋಧನರಾದ ತಮ್ಮ ಶಾಸನವು ನಮಗೆ ಮಾನ್ಯವೇ ಸರಿ.

ವಿಶ್ವಾ :—ತಥಾಸ್ತು! ನಡೆಯಿರಿ, ಇನ್ನು ಸಾಯಂಸಂಧ್ಯೆಯನ್ನು ಉಪಾಸಿಸಿ, ನಾಳೆ, ಮಿಥಿಲಾಪುರಕ್ಕೆ ಹೊರಡುವ

(ಎಲ್ಲರೂ ಹೊರಡುವರು.)



|| ಶ್ರೀಃ ||

# ಚತುರ್ಥಾಂಕಂ

---

ದಶರಥವರಸುಕುಮಾರನೆ |
ನಿಶಾಚರವಿನಾಶಕರನೆ ಲಕ್ಷ್ಮಣಾಗ್ರಜನೇ ||
ಕುಶಿಕಾತ್ಮಜಮುಖಪಾಲನೆ |
ಕುಶೇಶಯಾಕ್ಷನೆ ಅಹಲ್ಯೆಗೊಲಿದನೆ ಸಲಹೈ ||

(ಸಾಗರತೀರದಲ್ಲಿ ವ್ಯೋಮಚಾರಿಗಳಾದ ಸಿದ್ಧಚಾರಣರ ಪ್ರವೇಶ)

ಸಿದ್ಧ :—ಆಹಾ, ರಾಮಚಂದ್ರನಪ್ರಭಾವವನ್ನೆಷ್ಟು ವರ್ಣಿಸಿದರೂ ಸ್ವಲ್ಪವೇ! ಮಹಾ ವೀರ್ಯನಾದ ಆತನು ಬಿಟ್ಟ ಬಾಣದ ಶಕ್ತಿಯನ್ನೆಷ್ಟು ಕೊಂಡಾಡಿದರೂ ಸಾಲದು !

ಚಾರಣ :—ರಾಮನ ಹೃದಯವು ಸಜ್ಜನರ ವಿಷಯವಾಗಿ ಎಷ್ಟು ದಯಾರಸದಿಂದ ಕೂಡಿರುವುದೋ, ದುರ್ಜನರ ವಿಷಯದಲ್ಲಿ ಆತನ ಬಾಣದ ತೀಕ್ಷ್ಣತೆಯೂ ಅಷ್ಟೇ ವೇಗವಾಗಿರುವುದು ! ಅಬ್ಬ ! ತಾಟಕೀ ಸುಬಾಹುಗಳು ಸಪರಿವಾರರಾಗಿ ಸತ್ತುಬಿದ್ದರು. ದೇವ-ಗೋ-ಬ್ರಾಹ್ಮಣ ವೃಂದಕ್ಕೆಲ್ಲಾ ಆನಂದವುಂಟಾಯ್ತು ! ಯಜ್ಞಯಾಗಂಗಳಿಗೆ ನಿರ್ವಿಘ್ನತೆಯುಂಟಾಯ್ತು !

ಸಿದ್ಧ :—ಆಶ್ಚರ್ಯವಾಶ್ಚರ್ಯವು. ಶತ್ರುಭಯಂಕರನಾದ ಶ್ರೀರಾಮನು ಬಿಟ್ಟ ಬಾಣದಿಂದ ಮಾರೀಚನಿಗಾದ ಅವಸ್ಥೆಯನ್ನು ನೋಡಿದೆಯಾ !

ಚಾರಣ :—ನೋಡಿದೆನು. ಆ ರಕ್ಕಸನು, ಗೋಬ್ರಾಹ್ಮಣರನ್ನು ಹಿಂಸಿಸುತ್ತಿದುದಕ್ಕೆ ಪ್ರಾಯಶ್ಚಿತ್ತವಾಗಿ ಆ ಬಾಣದಿಂದ ಸುಳಿಗಾಳಿಗೆ

ಸಿಕ್ಕಿದಂತೆ ನಲುಗಿ ಮುದ್ದೆಯಾಗಿ ತೂರಿಕೊಂಡು ಹೋಗಿ ಸಮುದ್ರದಲ್ಲಿ ಬಿದ್ದು, ಮುಳುಗಿ ಮುಳುಗಿ, ತೊಳಲಿ, ಬಳಲಿ, ಕಂಗೆಟ್ಟುಹೋದನು !

ಸಿದ್ಧ :—ಅದೋ ಅದೋ-ನೋಡು, ಅಲ್ಲಿಬರುತ್ತಿರುವ ಆ ಮಾರೀಚನ ಅವಸ್ಥೆಯನ್ನು ನೋಡು !

ಚಾರಣ :—ಇಲ್ಲಿಯೇ ನಿಂತು, ಆ ಧೂರ್ತನ ಮನೋಗತವೇ ನಾಗಿರುವುದೆಂದು ತಿಳಿಯುವ !

ಸಿದ್ಧ :—ಸರಿ, ಹಾಗಾದರೆ, ನಾಪಿತ್ತ, ಗಗನದಲ್ಲಿಯೇ ಮರೆಯಾಗಿದ್ದು ನೋಡುವ (ಮರೆಯಾಗುವರು)

(ಸಂಭ್ರಾಂತನಾದ ಮಾರೀಚನು ಪ್ರವೇಶಿಸುವನು.)

ಮಾರೀಚ :—(ಸಿಟ್ಟುಸಿರಟ್ಟು) ಅಯ್ಯೋ ! ಆ ದಾಶರಥಿಯು ಬಾಲಮಾತ್ರನೆಂದು ಬಗೆದು, ದುಡುಕಿದ ನನಗೆ, ಈ ಅವಸ್ಥೆಯುಂಟಾಯಿತು ! ಅಕಟಕಟಾ ! ಸಾವಿರಆನೆಗಳ ಬಲವುಳ್ಳವಳಾದ ಆ ನನ್ನ ತಾಯಿ, ಆ ದಶರಥಪುತ್ರನ ಬಾಣವೊಂದರಿಂದ ಕ್ಷಣಮಾತ್ರದಲ್ಲಿ ಸತ್ತಳು. ಮಾವನಾದ ಸುಬಾಹುವೂ ನಮ್ಮ ಪರಿವಾರವೂ ಹೇಳಹೆಸರಿಲ್ಲದಂತಾದರು ! ನನ್ನ ಗತಿಯನ್ನೆಂತೂ ಹೇಳಲಾಗದು ! (ಅ. ೧.)

(ನಾಲ್ಕುಕಡೆಯನ್ನೂ ನೋಡುತ್ತ) ಹಾ, ಆ ಬಾಣದ ಶೀತವಾಯುವಿನಿಂದ ನನ್ನ ದೇಹವೆಲ್ಲಾ ಸುರುಳಿಸುರುಳಿಯಾಗಿ ನುಲಿದು ಮುದ್ದೆಯಾಯಿತು ! ಅದರ ವೇಗವಾದರೋ ಹೃದಯದಲ್ಲಿ ದಳ್ಳುರಿ ಹತ್ತಿದಂತೆ ಬೇಯುತ್ತಿರುವದು. ಅದರ ಶಕ್ತಿಯು ಅಷ್ಟಕ್ಕೆ ನನ್ನನ್ನು ಬಿಡದೆ, ಕಡಲಿನಲ್ಲಿ ಮುಳುಮುಳುಗಿಸಿತು ! ಅಯ್ಯೋ ದುರ್ವಿಧಿಯೇ ! ಆ ಬಾಣಕ್ಕೆ ಸಿಕ್ಕಿದ ನನ್ನ ಅವಸ್ಥೆ ಹೀಗಾಯಿತೇ ! ಇದನ್ನೆಂತು, ಸೈರಿಸಲಿ ? (ಅ. ೨.) (ದುಃಖಿಸುವನು)

ಸಿದ್ಧ :—(ನಸುನಗುತ್ತ) ಸ್ಮರಿಸದಿದ್ದರೆ ರಾಮಬಾಣಕ್ಕೆ ಬಲಿ ಬಿದ್ದು ದುಃಖದಿಂದ ಮುಕ್ತನಾದರಾಯ್ತು !

ಮಾರೀಚ :—(ಬೆದರಿ) ಯಾರು ಯಾರು ? ಆತನು ಬಂದನೇ ? (ಸುತ್ತಲೂ ನೋಡುತ್ತ) ನನಗಾದರೋ ರಕಾರೋಚ್ಚಾರಣ ಶ್ರವಣ ಮಾತ್ರದಿಂದಲೇ ಆಕಾರವೇ ವಿಕಾರವಾಗಿ, ನಾಲಿಗೆಯೊಣಗಿ ಉಸಿರಾಡುವುದೂ ನಿಂತುಹೋಗುವುದು. ಇನ್ನು ಆ-ಆ-ದಾಶರಥಿಯು

ಚಾರಣ :—ಶ್ರೀರಾಮನ ಬಾಣದ ಶಕ್ತಿಯು ಅಮೋಘವಾದುದು. ಅದೆಂದಿಗೂ ವ್ಯರ್ಥವೆನ್ನಿಸುವದಲ್ಲ. ದಾಶರಥಿಯ ಬಾಣದಿಂದ ಮಾರೀಚನೊಬ್ಬನೇ ಅಲ್ಲ; ರಾವಣನೂ ಸಮೂಲವಾಗಿ ನಾಶವಾಗುವನೆಂದು ಬಲ್ಲೆವು.

ಮಾರೀಚ :—(ತುದಿನಾಲಿಗೆಯಿಂದ ತುಟಿಯನ್ನು ಸವರಿಕೊಳ್ಳುತ್ತ) ಆ-ಆ-ದಾಶರಥಿಯನ್ನು ಹೊಗಳುವರಾರೋ ಕಣ್ಣಿಗೇ ಬೀಳುವುದಿಲ್ಲ. ಆತನೇನಾದರೂ ಬಂದನೆ !

ಸಿದ್ಧ :—ದಾನವದಮನನಾದ ರಾಮಚಂದ್ರನನ್ನು ಎಷ್ಟು ನೋಡುತ್ತಿದ್ದರೂ ಕಣ್ಮನಂಗಳು ತಣಿಯವು !

ಮಾರೀಚ :—ಕಷ್ಟ ಕಷ್ಟ ! ಇನ್ನಿಲ್ಲಿ ನಿಂತು ಕೇಳುತ್ತಿರುವುದು ಕಷ್ಟ, ಹಿಂದಕ್ಕೆ ಹೋದರೆ ರಾವಣನು ಬಿಡುವುದಿಲ್ಲ. ನಾನಿನ್ನು ಆ ರಾವಣನ ಕಣ್ಣಿಗೂ ಬೀಳದೆ, ಆ ದಾಶರಥಿಯ ಹೆಸರುಕೂಡ ಕಿವಿಗೆ ಬೀಳದಿರುವ ಸ್ಥಳಕ್ಕೆ ಹೋಗಿ, ತಪಸ್ಸನ್ನಾದರೂ ಮಾಡುವೆನು. (ಹೊರಟು ಹೋಗುವನು)

(ಸಿದ್ಧಚಾರಣರು ಮುಂದೆ ಬರುವರು)

ಸಿದ್ಧ :—ಆಯಿತು, ಮಾರೀಚನಿಗೆ ಸರಿಯಾದ ಶಿಕ್ಷೆಯೇ ಆಯಿತು ತಾಟಕೀ-ಸುಬಾಹು ನಿಧನದಿಂದ ಈತನ ದರ್ಪವೇ ಹೋಯಿತು. ಇನ್ನಿವನಿಂದ ಯಾರಿಗೂ ಭಯವಿಲ್ಲವಾಯಿತು !

ಚಾರಣ :—ಸದ್ಯಕ್ಕೆ ಇವನಿಂದ ಭಯವಿಲ್ಲವೆಂಬುದು ನಿಜ. ಮುಂದೆ ಹೇಗೋ ?

ಸಿದ್ಧ :—ಮುಂದೆಯೂ ಭಯಪಡಬೇಕಾಗಿಲ್ಲ. ರಕ್ಕಸಾರಿಯಾದ ರಾಮಚಂದ್ರನ ಬಾಣವು ಎಂದಿಗಾದರೂ ಇವನನ್ನು ಸುಮ್ಮನೆ ಬಿಡಲಾರದು !

ಚಾರಣ :—ರಾಮಚಂದ್ರನು ಇಷ್ಟರಲ್ಲಿ ವಿಶ್ವಾಮಿತ್ರರ ಆಶ್ರಮವನ್ನು ಬಿಟ್ಟು ಬರುತ್ತಿರಬಹುದು. ನಡೆ. ಇನ್ನೂ ಆತನಿಂದ ನಡೆಸಲ್ಪಡುವ ಅಮಾನುಷವ್ಯಾಪಾರವನ್ನು ನೋಡಿ, ಪಾಡಿ, ಕೊಂಡಾಡಿ ಸಂತೋಷಿಸುವ.

ಸಿದ್ಧ :—ನಿಜ; ಅದೋನೋಡಲ್ಲಿ, ವಿಮಾನಾರೂಢರಾದ ಗಂಧರ್ವವಿದ್ಯಾಧರರೇ ಮೊದಲಾದವರು ರಾಮಸಂದರ್ಶನೋತ್ಸುಕರಾಗಿ ಹೋಗುತ್ತಿರುವರು. ನಡೆ ನಾವೂ ಹೋಗುವ.

---

(ವಿಶಾಲಾನಗರದ ಪುರೋದ್ಯಾನದ ಬಳಿಯಲ್ಲಿ ಬ್ರಾಹ್ಮಣರ ಪ್ರವೇಶ)

೧ ನೇ ವೇದಶರ್ಮ :—ಅಗ್ನಿಶರ್ಮ ! ಮಹಾತ್ಮನಾದ ವಿಶ್ವಾಮಿತ್ರನಿಂದ ಬ್ರಹ್ಮವೃಂದಕ್ಕೆಲ್ಲಾ ಎಷ್ಟು ಸಂತೋಷವಾಯಿತು ! ಆ ಪುಣ್ಯಾತ್ಮನೆಷ್ಟು ಉದಾರನಯ್ಯಾ !

೨ ನೇ ಅಗ್ನಿಶರ್ಮ :—ಅಹುದಹುದು, ಯಾಚಕರಿಗೆಲ್ಲಾ ತೃಪ್ತಿಯುಂಟಾಯಿತು !

೩ ನೇ ವೇದಶರ್ಮ :—ಅದೆಲ್ಲಸರಿ, ರಾಮಲಕ್ಷ್ಮಣರಸಂದರ್ಶನವಾದುದಂತೂ ಪರಮಾನಂದಕರ ವಿಷಯವು !

೪ ನೇ ವಿಷ್ಣುಶರ್ಮ :—ನಿಜ, ನಿಜ ! ಮಹಾತ್ಮನಾದ ಕೌಶಿಕನಿಂದ ನಮಗೆ ಸುಖಭೋಜನವೂ ಯಥೇಷ್ಟದಕ್ಷಿಣಾತಾಂಬೂಲ ಸಂಭಾವನೆಗಳೂ ಮತ್ತು ರಾಮಲಕ್ಷ್ಮಣರ ಸಂದರ್ಶನ, ಅವರ ಅಮಾನುಷವ್ಯಾಪಾರ, ಅದ್ಭುತಮಹಿಮಾ ಪ್ರದರ್ಶನ ಇವುಗಳೂ ಏಕಕಾಲದಲ್ಲಿಯೇ ಲಭಿಸಿದವು.

೧ ನೇ ವೇದ :—ಅದೆಲ್ಲಾ ನಿಜ. ಆದರೂ ನನ್ನ ಸಂಸಾರ ದೊಡ್ಡದು. ನನಗಿನ್ನೂ ಆಶೆಬಿಡಲಿಲ್ಲ. ಇನ್ನೂ-ಇನ್ನೂ ಆರ್ಜಿಸುವ ಮನಸ್ಸುಂಟು

ಅಗ್ನಿಶರ್ಮ :—(ನಕ್ಕು) ಹಾಗಾಗುವುದರಲ್ಲಿ ಆಶ್ಚರ್ಯವೇನು ? “ ಕ್ಷತ್ರಿಯ, ಭೂಸುರ, ಸಾಗರ, ಮೃತ್ಯು, ಜಠರ, ಕೃಶಾನು, ಗೃಹ ” ಈ ಏಳೂ ತೃಪ್ತಿಯನ್ನು ಹೊಂದುವಂತಿಲ್ಲ. ಮತ್ತೆಮತ್ತೆಯೂ ಬಯಸುತ್ತ, ನಿತ್ಯದಲ್ಲಿ ವೃದ್ಧಿಹೊಂದುತ್ತಲಿರುವದು ಸ್ವಭಾವವು ! (ಅ. ೩.)

||ತೆರೆಯಲ್ಲಿ|| ಜ್ಞಾನಿಯೆಂದರೆ, ದಾನಶೀಲನೆಂದರೆ ಜನಕಮಹಾರಾಯನೇ ಸರಿ !

ಬ್ರಾಹ್ಮಣರು:—(ತೆರೆಯ ಕಡೆ ಆಶ್ಚರ್ಯಚಕಿತರಾಗಿ ನೋಡುತ್ತ) ಅದೋ-ಅದೋ-ವಿಶ್ವಾಮಿತ್ರರ ಯಜ್ಞಕ್ಕಾಗಿ ಬಂದಿದ್ದ ಋಷಿಗಳು ಇತ್ತ ಕಡೆ ಬರುವರು !

(ಋಷಿಗಳ ಪ್ರವೇಶ)

ಬ್ರಾಹ್ಮಣರು :—(ಕೈಮುಗಿದು) ಮಹಾತ್ಮರೇ ! ತಾವೆಲ್ಲರೂ ಹೊರಟಿರುವುದೆಲ್ಲಿಗೆ ?

ಋಷಿಗಳು :—ಮಿಥಿಲಾನಗರಿಗೆ !

ಬ್ರಾ :—(ಕುತೂಹಲದಿಂದ) ಅಲ್ಲಿ ವಿಶೇಷವೇನು ?

ಋ :—ರಾಜರ್ಷಿಯಾದ ಜನಕಮಹಾರಾಯನು ಒಂದು ಘನವಾದ ಯಾಗವನ್ನು ಮಾಡುತ್ತಿರುವನಾದುದರಿಂದ ಅಲ್ಲಿಗೆ ಹೋಗುವೆವು

ಬ್ರಾ :—(ಸಂತೋಷದಿಂದ) ಏನು ? ಜನಕಮಹಾರಾಯನು ಯಾಗಮಾಡುತ್ತಿರುವನೇ ! ಹಾಗಿದ್ದರೆ ಭೂಸುರವೃಂದಕ್ಕೆಲ್ಲಾ ಯಥೇಷ್ಟ ದಾನಲಾಭವು !

ಋ :—ಆಹಾ ! ಹೊರಡಿರಿ, ಅಲ್ಲಿಗೆ ರಾಮಲಕ್ಷ್ಮಣರೊಡನೆ ವಿಶ್ವಾಮಿತ್ರರು ಬರುವುದರಿಂದ ಮತ್ತೂ ಆನಂದೋತ್ಸವವಾಗುವದು.

ಬ್ರಾ :—ಏನು ಏನು ! ವಿಶ್ವಾಮಿತ್ರರೂ ಬರುವರೇ ?

ಋ :—ಅಹುದಹುದು ! ರಾಮಲಕ್ಷ್ಮಣರೂ ಜನಕಮಹಾರಾಯನಲ್ಲಿರುವ ಮಹಾಧನುಸ್ಸನ್ನು ನೋಡಲಿಕ್ಕಾಗಿ ಬರುವರು. ಅದೇ ಸಂದರ್ಭದಲ್ಲಿಯೇ ಜನಕಮಹಾರಾಯನು ವೀರಶುಲ್ಕಳಾದ ತನ್ನ ಪ್ರೇಮಪುತ್ರಿ ಜಾನಕಿಯ ವಿವಾಹವನ್ನೂ ನಡೆಯಿಸಬಹುದು ! ಆಗಲಂತೂ ನಿಮ್ಮೆಲ್ಲರ ಮನಸ್ಸೂ ತೃಪ್ತಿ ಹೊಂದುವುದರಲ್ಲಿ ಸಂದೇಹವಿಲ್ಲ ! (ಅ. ಳ.)

ಬ್ರಾ :—ಸರಿ ಸರಿ; ಪೂಜ್ಯರೇ ! ಹಾಗಾದರೆ ನಾವು ಮುಂದಾಗಿಯೇ ಹೋಗುವೆವು. ಮಹಾತ್ಮರಾದ ವಿಶ್ವಾಮಿತ್ರರು ಯಾವಾಗ ಬರುವರು ?

ಋ :—ಅವರು ಇದೇ ವಿಶಾಲನಗರಾಧಿಪತಿಯಾದ ಸುಮತಿ ಮಹಾರಾಜನ ಆತಿಥ್ಯದಲ್ಲಿದ್ದರು. ಇನ್ನೇನು ಅವರೂ ಇಷ್ಟರಲ್ಲಿ ಬರಬಹುದು ! ನೀವು ಮುಂದಾಗಿ ಹೋಗಬಹುದು. ಹೊರಡಿರಿ ! (ಬ್ರಾಹ್ಮಣರು ಹೋಗುವರು)

ಋ :—(ಪರಸ್ಪರವಾಗಿ) ನಡೆಯಿರಿ, ರಾಮಲಕ್ಷ್ಮಣರು ಬರುವಾಗ ನಾವು ದಾರಿಯಲ್ಲಿ ಗುಂಪುಕಟ್ಟಿಕೊಂಡಿರುವುದು ಸರಿಯಲ್ಲ. ನಾವು ಮುಂದು ಮುಂದಾಗಿ ಹೋಗಿ ಮಿಥಿಲಾನಗರಿಯಲ್ಲಿ ಅವರ ಆಗಮನವನ್ನು ನಿರೀಕ್ಷಿಸುವ !

||ತೆರೆಯಲ್ಲಿ|| ವಾದ್ಯ ಕೋಲಾಹಲವಾಗುವುದು.

ಋಷಿ :—ಕುತೂಹಲದಿಂದ ನೋಡುವರು,

ಕಂಚುಕಿ :—ಪ್ರವೇಶಿಸುವನು.

ಋಷಿ :—ಇದೇನಯ್ಯಾ, ಕೋಲಾಹಲ !

ಕಂಚುಕಿ :—(ಕೈಮುಗಿದು) ಪೂಜ್ಯರೇ ! ತಮಗೆ ತಿಳಿಯದೆ ? ರಘುವಂಶಲಲಾಮರಾದ ರಾಮಲಕ್ಷ್ಮಣರೊಡನೆ ತಪೋಧನರಾದ ವಿಶ್ವಾಮಿತ್ರರು ನಮ್ಮ ಸುಮತಿ ಮಹಾರಾಯನಲ್ಲಿ ಅತಿಥಿಗಳಾಗಿ ಬಂದಿದ್ದರಷ್ಟೆ ? ಅವರು ಮಿಥಿಲಾನಗರಕ್ಕೆ ಹೊರಟಿರುವುದರಿಂದ ನಮ್ಮ ರಾಜನು ಅವರನ್ನು ಬೀಳ್ಕೊಡುವುದಕ್ಕಾಗಿ ಸಪರಿವಾರನಾಗಿ ಬರುತ್ತಿರುವನು.

ಋ:—ನಡೆಯಿರಿ, ನಾವೂ ಬೇಗಬೇಗಹೋಗುವ (ಹೊರಡುವರು)

(ಬಳಿಕ ರಾಮಲಕ್ಷ್ಮಣರೊಡನೆ ವಿಶ್ವಾಮಿತ್ರನನ್ನು ಮುಂದು
ಮಾಡಿಕೊಂಡು ವಿಶಾಲಪುರದರಸು ಸುಮತಿ
ಮಹಾರಾಜನು ಬರುವನು)

ವಿಶ್ವಾ :—ಎಲೈ, ಇಕ್ಷ್ವಾಕು ಕುಲೋದ್ಭವನಾದ ರಾಜನೇ ! ನಿನ್ನ ಆತಿಥ್ಯದಿಂದ ನಾವು ಬಹು ಸಂತೋಷಪಟ್ಟೆವು.

ಸುಮತಿ :—ಪೂಜ್ಯರೇ ! ಬ್ರಹ್ಮವೇತ್ತರಾದ ತಾವೂ, ತೇಜೋವಿರಾಜಮಾನರೂ-ಇಕ್ಷ್ವಾಕುಕುಲವಿವರ್ಧನರೂ ಆದ ರಾಮಲಕ್ಷ್ಮಣರೂ ಬಂದು, ನನ್ನನ್ನು ಧನ್ಯನಾಗಿ ಮಾಡಿದಿರಿ ! ತಮ್ಮ ಅನುಗ್ರಹದಿಂದಲೇ ತಮ್ಮನ್ನು ಸತ್ಕರಿಸುವಯೋಗವು ನನಗಾಯ್ತು ! ಈ ರಾಮಲಕ್ಷ್ಮಣರ ಸೌಜನ್ಯವನ್ನೆಂದಿಗೂ ನಾನು ಮರೆಯಲಾರೆನು !

ವಿಶ್ವಾ :—ಎಲೈ ರಾಜನೇ ! ನಿನ್ನ ರಾಜ್ಯದ ಎಲ್ಲೆಯನ್ನೂ ದಾಟಿದುದಾಯ್ತು ! ಇನ್ನು ನಮ್ಮನ್ನು ಬೀಳ್ಕೊಡು ?

ಸುಮತಿ :—ಪೂಜ್ಯರೇ ! ಮಹಾನುಭಾವರಾದ ಈ ರಾಮಲಕ್ಷ್ಮಣರು ನಡೆಯಿಸಿದ ಅಮಾನುಷವ್ಯಾಪಾರ, ಅದ್ಭುತಶೌರ್ಯ- ಅದ್ವಿತೀಯ ಪರಾಕ್ರಮಗಳನ್ನು ತಮ್ಮ ಮುಖದಿಂದ ಕೇಳಿ, ಇವರ ಅನುಪಮಸೌಂದರ್ಯ, ಅಪರಿಮಿತಕಾರುಣ್ಯ, ಅಸಾಧಾರಣಸದ್ಗುಣಸಂಪತ್ತಿ, ಇವೆಲ್ಲವನ್ನೂ ಕಣ್ಣಾರೆನೋಡಿ, ಮನಸೋತ ನಾನು, ಅನವರತವೂ ಇವರನ್ನು ನೋಡುತ್ತಲೇ ಇರಬೇಕೆಂದು ಬಯಸುವೆನು. ಆದರೂ-ನನ್ನಂತೆಯೇ ಇನ್ನೂ ಇತರ ರಾಜರೂ-ಪ್ರಜೆಗಳೂ ಇವರನ್ನು ನೋಡಿ ಆನಂದಿಸಬೇಕಾಗಿರುವುದರಿಂದ ಇದೋ ತಮ್ಮ ಅಪ್ಪಣೆಯನ್ನು ತೆಗೆದುಕೊಳ್ಳುವೆನು. (ಪಕ್ಕಕ್ಕೆ ತಿರುಗಿ) ಸಾನುಜನಾದ ರಾಮಚಂದ್ರನೇ ! ಲೋಕಮೋಹನವಿಗ್ರಹನಾದ ನಿನಗೆ, ನಿನ್ನೀದುಷ್ಟನಿಗ್ರಹಪೂರ್ವಕ-ಶಿಷ್ಟಪರಿಪಾಲನಕಾರ್ಯಕ್ಕೆ ಅನವರತವೂ ಮಂಗಳಾಶಾಸನವೂ, ವಿಜಯಪರಂಪರೆಯೂ ಉಂಟಾಗುತ್ತಿರಲಿ ! (ಅ. ೨೪ )

ರಾಮ :—(ಕೈನೀಡಿ) ಆರ್ಯನೇ ! ವಯೋ-ಬುದ್ಧಿ-ಜ್ಞಾನಗಳೆಲ್ಲದರಲ್ಲಿಯೂ ವೃದ್ಧನಾದ ನಿನ್ನ ಆಶಂಸೆಯು, ನನಗೆ, ನಮ್ಮ ಜನಕನ ಆಶೀರ್ವಾದದಂತೆಯೇ ಸರಿ !

ವಿಶ್ವಾ :—ಎಲೈ, ಸುಮತಿನೃಪಾಲರಾಯನೇ ! ನಾವಿನ್ನು ಹೊರಡುವೆವು.

ಸುಮತಿ :— ನಾನೂ ಅಪ್ಪಣೆಯನ್ನು ತೆಗೆದುಕೊಳ್ಳುವೆನು ! (ಹೋಗುವನು.)

ವಿಶ್ವಾ :—ಸುಕುಮಾರನೇ ! ಈತನು ಪರಮಧಾರ್ಮಿಕನು.

ರಾಮ :—ಪೂಜ್ಯರೇ ! ತಮ್ಮ ಅನುಗ್ರಹದಿಂದ ನಮಗೆ ಈ ರಾಯನ ಸ್ನೇಹಬಾಂಧವ್ಯವು ಲಭಿಸಿತಲ್ಲದೆ, ಪರಮಪಾವನವಾದ ಗಂಗಾವತರಣ ವೃತ್ತಾಂತವೂ, ತಮ್ಮ ವಂಶಪರಂಪರಾವರ್ಣನವೂ ತಮ್ಮ ಸೋದರಿಯಾದ ಕೌಶಿಕಾದೇವಿಯು ನದೀರೂಪದಿಂದ ಲೋಕೋದ್ಧಾರಕಾರ್ಯದಲ್ಲಿ ನಿರತಳಾಗಿರುವ ಪವಿತ್ರಚಾರಿತ್ರ್ಯಕಥನವೂ ನಮಗೆ ಅತ್ಯಾನಂದವನ್ನುಂಟುಮಾಡಿದುವು.

ಲಕ್ಷ್ಮಣ :— ಪೂಜ್ಯರೇ ! ನಾವು ಮಿಥಿಲಾನಗರಕ್ಕೆ ಹೋಗುವ ಮಾರ್ಗದಲ್ಲಿ ಮತ್ತಾವಾವ ಪಟ್ಟಣಗಳಿರುವುವು ? ಇನ್ನೂ ಎಷ್ಟು ದಿನಗಳ ಪಯಣವಾಗಬಹುದು ?

ವಿಶ್ವಾ :—ಮುಂದೆ ಬರುವುದೇ ಮಿಥಿಲಾನಗರವು. ಜಾಗ್ರತೆಯಾಗಿ ನಡೆಯಿರಿ.

(ಮೂವರೂ ಗಮನವನ್ನು ಅಭಿನಯಿಸುತ್ತ ಮುಂದೆ ಬರುವರು.)

ವಿಶ್ವಾ:—ಸುಕುಮಾರರೇ ! ಅದೋ ಅಲ್ಲಿಕಾಣುತ್ತಿರುವುದೇ ಮಿಥಿಲಾಪಟ್ಟಣವು. ಜನಕಮಹಾರಾಯನ ಜ್ಞಾನ-ಮಾನ-ದಾನ ಧರ್ಮ-ದಯಾ ಔದಾರ್ಯಾದಿ ಉಜ್ವಲಗುಣಗಳಿಗೆ ಅನುಗುಣವಾಗಿ ಆತನ ಪಟ್ಟಣದ ವೈಭವವೂ ಎತ್ತಿಕಾಣುತ್ತಿದೆ !

ರಾಮ :—ಪೂಜ್ಯರೇ ! ಅಧ್ಯಾತ್ಮಜ್ಞಾನ ಸಂಪದ್ಯುತನಾದ ಜನಕಮಹಾರಾಯನ ಯಜ್ಞಸಮಾರಂಭವೆಷ್ಟು ಘನವಾಗಿರುವುದು ! (ಮುಂದೆ ಬರುವರು)

ರಾಮ :—(ಮುಂದೆಬಂದು ಲಕ್ಷ್ಮಣನ ಕೈಹಿಡಿದು) ಅನುಜಾತನೇ ! ಇತ್ತ ನೋಡು, ವನದ ಸೊಬಗನ್ನು ! ಸುಗಂಧಮಾರು

ತನ ಮಂದಗಮನವೂ, ಈ ಫಲಪುಷ್ಪಭರಿತ ವೃಕ್ಷಗಳಸೊಂಪೂ ಅದೆಷ್ಟು ರಮ್ಯವಾಗಿರುವುದು ! ಇಲ್ಲಿ ಪರಸ್ಪರ ವೈಷಮ್ಯವನ್ನು ಳಿದು ಸುಖಿಸುತ್ತಿರುವ ಪಶು-ಪಕ್ಷಿ ಮೃಗಸಂಕುಲಗಳನ್ನೂ ನೋಡು ನೋಡು. (ಅ. ೭.)

ಲಕ್ಷ್ಮಣ :—(ಕೌತುಕದಿಂದ) ಆರ್ಯನೇ ! ಈ ವನವು ಎಷ್ಟು ಆನಂದದಾಯಕವಾಗಿದೆ. ನೋಡು ನೋಡು ! ಪುಲಿ-ಪಶುಗಳೂ, ಕರಿ-ಸಿಂಹಗಳೂ ಎಷ್ಟು ಅನ್ಯೋನ್ಯದಿಂದಿರುವುವು ?

ರಾಮ :—(ವಿಶ್ವಾಮಿತ್ರನನ್ನು ಕುರಿತು) ಪೂಜ್ಯರೇ ! ಈ ತಪೋವನವಾರದು ? ಇಲ್ಲಿ ಜನಸಂಚಾರವೇ ಇಲ್ಲದಿರಲು ಕಾರಣವೇನು ?

ವಿಶ್ವಾ :—|| ಸ್ವಗತಂ || ಈ ಪುರುಷೋತ್ತಮನಿಂದಾಗಬೇಕಾಗಿರುವ ಉದ್ಧಾರಕಾರ್ಯವನ್ನು ಆಗುವಂತೆ ಮಾಡಲು ಇದೇ ಸಮಯವು ! || ಪ್ರಕಾಶಂ || ವತ್ಸ ! ರಾಮಚಂದ್ರ ! ನೀನು ಅಗತ್ಯವಾಗಿ ಕೇಳತಕ್ಕ ವಿಷಯನೇ ಇದು ! ಕೇಳು. ನಿಷ್ಠಾಗರಿಷ್ಠನೂ, ತೇಜೋವಿರಾಜಮಾನನೂ ಆದ ಗೌತಮಮಹರ್ಷಿಯ ಪುಣ್ಯಾಶ್ರಮವೇ ಇದು. ವಾಸವಸಂಗದಿಂದ ಕಲುಷಿತೆಯಾದ ಭಾರ್ಯೆಯನ್ನು ಶಾಪೋಪಶಾಪಗಳಿಂದ ನಿರ್ಬಂಧಿಸಿ, ಗೌತಮನು ತಪಸ್ಸಿಗಾಗಿ ಬೇರೊಂದುಕಡೆಗೆ ಸ್ವೇಚ್ಛೆಯಾಗಿ ಹೋಗಿರುವನು. ಆತನಿಲ್ಲಿಲ್ಲದುದರಿಂದ ಈ ಆಶ್ರಮವು ನಿರ್ಜನಪ್ರದೇಶವಾಗಿರುವುದು.

ರಾಮ :—ಹಾಗಾದರೆ ಈಗ ಆ ಗೌತಮಭಾರ್ಯೆಯೆಲ್ಲಿರುವಳು ?

ವಿಶ್ವಾ :—(ಸಂತೋಷದಿಂದ) ಸುಕುಮಾರನೇ ! ಆ ತಪಸ್ವಿನಿ, ನಿನ್ನ ಸಂದರ್ಶನಕ್ಕಾಗಿ ಘೋರತಪಃಕ್ಲೇಶಗಳನ್ನು ಸಹಿಸಿಕೊಂಡಿರುವಳು. ಮೊದಲು ಆಕೆಗೆ ದರ್ಶನವಿತ್ತು ಉದ್ಧಾರಮಾಡುವುದು ನಿನಗೆ ಕರ್ತವ್ಯವಾಗಿರುವುದು. ಮುಂದೆ ನಡೆ, ಹೋಗುವ !

ರಾಮ :—(ವಿನಯದಿಂದ) ಅಮೋಘಶಾಸನರಾದ ಬ್ರಾಹ್ಮಣೋತ್ತಮರ ಆಶಂಸೆಯೇ ನನ್ನನ್ನು ಇಷ್ಟು ಗಣ್ಯನಾಗಿ ಮಾಡಿರುವುದ

ಲ್ಲದೆ, ಈ ಮಾನ್ಯತೆಗೆ ನನ್ನ ಶಕ್ತಿಯೇ ಕಾರಣವೆಂದು ನಾನು ಭಾವಿಸಿಲ್ಲ. ಆದುದರಿಂದ ಹಿರಿಯರಾದ ತಾವು ಆಜ್ಞಾಪಿಸಿದಂತೆಯೇ ನಾನು ಆಚರಿಸುವೆನು (ಲಕ್ಷ್ಮಣನ ಕೈಹಿಡಿದು) ಅನುಜಾತ ! ಬಾ

ವಿಶ್ವಾ :—ಭಕ್ತ್ಯಧೀನನೂ, ಭೂಸುರಪ್ರಿಯನೂ ಆದ ನಿನ್ನಲ್ಲಿ ಈ ವಿನಯವಚನವು ಸಹಜ ಗುಣವಾಗಿರುವುದು. (ಆ. ಲ.)

ಲಕ್ಷ್ಮಣ :—(ತೆರೆಯಕಡೆ ಕೈನೀಡಿ ತೋರಿಸುತ್ತ) ಆರ್ಯನೇ ! ನೋಡಲ್ಲಿ ! ಭೂಮಿಯ ಮೇಲೆನಿಂತು ! ಶಿಲಾಪ್ರತಿಮೆಯಂತೆ ತೋರುತ್ತಿರುವ ಆ ನಾರೀಮಣಿಯಾರಿರಬಹುದು ? ಗಾಳಿ-ಮಳೆ-ಬಿಸಲುಗಳ ಹೊಡೆತದಿಂದ ಗಾಸಿಪಟ್ಟಿದ್ದರೂ ಆ ಘನತಪಶ್ಚರ್ಯೆಯಿಂದ ಎಷ್ಟು ಜಾಜ್ವಲ್ಯಮಾನಳಾಗಿದ್ದಾಳೆ ನೋಡು-ನೋಡು ! (ಆ ಕಿ.)

ವಿಶ್ವಾ :—ಎಲೈ ರಘುಕುಲನಂದನ ! ಕಟಾಕ್ಷಿಸು. ವಾಯುವಿನಿಂದೊಯ್ಯಲ್ಪಟ್ಟ ನಿನ್ನ ಚರಣಧೂಳಿಯು ಸೋಂಕಿದೊಡನೆಯೇ ದೃಷ್ಟಿಗೋಚರಳಾಗಿರುವ ಈ ತಪಸ್ವಿನಿಯೇ ಗೌತಮಭಾರ್ಯೆ !-ನಾರೀಶಿರೋಮಣಿಯಾದ ಅಹಲ್ಯೆ ! ಇಂದ್ರನ ಸಂಗದಿಂದಾದ ಕಲ್ಮಷವು ಪಾವನಾತ್ಮನಾದ ನಿನ್ನ ದರ್ಶನದಿಂದ ನಿವಾರಿಸಲ್ಪಟ್ಟಿತು. ಇಂದಿಗೆ ಗೌತಮರ ಶಾಪವೂ ವಿಮೋಚನೆಹೊಂದಿತು. ಇನ್ನು ಆ ತಪಸ್ವಿನಿಯ ಬಳಿಗೆ ಹೋಗಿ ಅವಳ ಸತ್ಕಾರವನ್ನು ಸ್ವೀಕರಿಸಿ, ಅನುಗ್ರಹಿಸು !

ರಾಮ :—ಗುರುಜನರ ಆಜ್ಞೆಯಂತೆಯೇ ಆಗಲಿ. (ಹೊರಡುವನು )

(ತಪೋವನ ಮಧ್ಯಪ್ರದೇಶದಲ್ಲಿ ಪೂಜಾಸಾಮಗ್ರಿಗಳೊಡನೆ ಅಹಲ್ಯೆಯ ಪ್ರವೇಶ )

ಅಹಲ್ಯಾ :—(ಆನಂದಬಾಷ್ಪವನ್ನು ಸುರಿಸುತ್ತ) ಹೇ ದಯಾಸಾಗರ ! ಪರಾತ್ಪರ ! ಭಕ್ತಮಂದಾರ ! ದೀನೋದ್ಧರ ! ಇಷ್ಟುಕಾಲದಮೇಲೆ, ಇಂದಿಗಾದರೂ ನಿನಗೆ ಈ ಕಿಂಕರಳಲ್ಲಿ ಕನಿಕರವುಂಟಾಯ್ತೋ!

ಪತಿತಪಾವನನೆಂಬ ಬಿರುದು ನಿನ್ನಲ್ಲಿ ಒಪ್ಪುವಹಾಗಾಯಿತೇ ! ದಶರಥ ನಂದನನಾಗಿ, ನನ್ನನ್ನು ಅನುಗ್ರಹಿಸಲಿಕ್ಕಾಗಿ ಬಂದಿರುವೆಯಲ್ಲವೆ ? (ದಾರಿಯಕಡೆ ನಿರೀಕ್ಷಿಸುವಳು )

(ವಿಶ್ವಾಮಿತ್ರನೊಡನೆ ರಾಮಲಕ್ಷ್ಮಣರು ಪ್ರವೇಶಿಸುವರು.)

ಅಹಲ್ಯಾ :—(ಕೈನೀಡಿವಿನೀತೆಯಾಗಿ) ಪುರುಷೋತ್ತಮನೇ ! ಪಾವನಾತ್ಮಕನೇ ! ಶರಣಾಗತಪರಿಪಾಲಕನೇ ! ಆರ್ತತ್ರಾಣಪರಾಯಣನೇ ! ಎಂದೆಂದಿಗೂ ಬಿಡದೆ ಸಲಹು. (ಅ. ೧೦.)

ರಾಮ :—(ಲಕ್ಷ್ಮಣನೊಡನೆ ಮುಂದೆ ಬಂದು) ತಾಯೇ ! ತಪಸ್ವಿನಿಯೂ ಮಹಾತ್ಮರಾದ ಗೌತಮರಿಗೆ ಭಾರ್ಯೆಯೂ ಆಗಿ ಪೂಜ್ಯಳೆನಿಸುವ ನಿನಗಿದೊ ವಂದಿಸುವೆವು. (ಕೈಮುಗಿಯುವರು )

ಅಹಲ್ಯಾ :—ಪುರುಷೋತ್ತಮನಾದ ರಾಮಚಂದ್ರನೇ ! ನಿನ್ನೀ ಲೀಲಾಮಾನುಷವೇಷಕ್ಕೆ, ಈ ನಿನ್ನ ವಿಭೂತಿಗೆ, ಅನವರತವೂ ಜಯಜಯಕಾರವಿರಲಿ ! ದಶರಥನಂದನ ! ಸಾನುಜನಾಗಿ ಸೀನೀಪೀಠದಲ್ಲಿ ವಿಶ್ರಮಿಸಿ, ನನ್ನೀಪೂಜೆಯನ್ನು ಸ್ವೀಕರಿಸಿ, ಅನುಗ್ರಹಿಸು ! (ವಿಶ್ವಾಮಿತ್ರರಬಳಿಗೆ ಬಂದ.) ಪೂಜ್ಯರೇ ! ನಮಸ್ಕರಿಸುವೆನು, ದಯೆಯಿರಿಸಿ ತಾವೂ ವಿಶ್ರಮಿಸಿಕೊಳ್ಳಬೇಕು. (ತಲೆಬಾಗಿ ನಮಸ್ಕರಿಸುವಳು.)

ವಿಶ್ವಾ :—ಭದ್ರೆ ! ನಿನಗೆ ಮಂಗಳವಾಗಲಿ. (ರಾಮಲಕ್ಷ್ಮಣರನ್ನು ಕುರಿತು) ಸುಕುಮಾರರರೇ ! ನೀವೂ ಕುಳಿತುಕೊಳ್ಳಿರಿ ! (ಮೂವರೂ ಆಸನಗಳಲ್ಲಿ ಕುಳಿತುಕೊಳ್ಳುವರು )

ಅಹಲ್ಯಾ:—(ವಿಶ್ವಾಮಿತ್ರನಿಗೆ ಅರ್ಘ್ಯಪಾದ್ಯಾದಿಗಳನ್ನೊಪ್ಪಿಸಿ, ಆ ಬಳಿಕ ಶ್ರೀರಾಮನಿಗೆ ಅರ್ಘ್ಯಪಾದ್ಯಗಳನ್ನಿತ್ತು, ಪುಷ್ಪಾಕ್ಷತೆಗಳಿಂದ ಪಾದಪೂಜೆಯನ್ನು ಮಾಡುವಳು. ಗಗನದಲ್ಲಿ ದೇವದುಂದುಭಿವಾದ್ಯಗಳಾಗುವುವು ಅಪ್ಸರೆಯರು ಬಂದು ನಾಟ್ಯ ಮಾಡುವರು.)

ಅಹಲ್ಯಾ :—(ರಾಮನ ಪಾದಗಳನ್ನು ಪೂಜಿಸುತ್ತ ಆನಂದ ದಿಂದ) ದೇವದೇವನೇ ! ದೀನೋದ್ಧರನೇ ! ದಯಾಸಾಗರನೇ ! ಧರ್ಮ ರಕ್ಷಣದೀಕ್ಷಾಬದ್ಧನೇ! ದಶರಥನಂದನನೇ ! ಪರಮಪುರುಷನೇ ! ಪರಮ ಪಾವನನೇ ! ಪರಮಪದನಾಥನೇ ! ಜಗನ್ನಾಥನೇ ! ಜಡಜಂಗಮವ್ಯಾಪ್ತನೇ ! ದುಷ್ಟನಿಗ್ರಹಪೂರ್ವಕ ಶಿಷ್ಟಜನಪರಿಪಾಲಕನೇ ! ಅನುಗ್ರಹಿಸು, ಉದ್ಧರಿಸು ! (ಅ. ೧೧.)

(ಎರಡು ಕೈಗಳನ್ನೂ ಜೋಡಿಸಿ ಪ್ರಾರ್ಥಿಸುವಳು.)

ರಾಮ :—(ಸಂತೋಷದಿಂದ, ಎದ್ದು ವರದಹಸ್ತವನ್ನು ತೋರಿ) ತಾಯೇ ! ನಿನ್ನ ಪೂಜೆಯು ಸರ್ವೇಶ್ವರನಿಗೆ ಸಮರ್ಪಿತವಾಯ್ತು ! ನಿನ್ನ ಘನತರತಪಶ್ಚರ್ಯೆಯಿಂದ ನೀನು ಸರ್ವರಿಂದಲೂ ಪರಮಪಾವನೆಯೆಂದು ಸಂಭಾವಿಸಲ್ಪಟ್ಟು, ಪತಿಸಾನ್ನಿಧ್ಯವನ್ನು ಹೊಂದುವೆ !

|| ಗಗನದಲ್ಲಿ || (ಮತ್ತೆ ದೇವದುಂದುಭಿಗಳಾಗುವುವು.)

|| ಗಗನದಲ್ಲಿ ದೇವತೆಗಳು || ಎಲೈ ತಪೋನಿಧಿಯಾದ ಗೌತಮನೆ! ನಿನಗೆ ಸುಸ್ವಾಗತವು ! ಪುರುಷೋತ್ತಮನಿಂದ ಅನುಗ್ರಹಿಸಲ್ಪಟ್ಟ ತಪಸ್ವಿನಿಯಾದ ಈ ಅಹಲ್ಯೆಯನ್ನು ಪರಿಗ್ರಹಿಸು !

(ಬ್ರಹ್ಮತೇಜೋವಿರಾಜಮಾನನಾದ ಗೌತಮನು ಪ್ರವೇಶಿಸುವನು)

(ರಾಮ ಲಕ್ಷ್ಮಣ ವಿಶ್ವಾಮಿತ್ರರು ಎದ್ದು ನಿಲ್ಲುವರು)

ಗೌತಮ :—(ಆನಂದೋತ್ಸಾಹಗಳಿಂದ ರಾಮನನ್ನೇ ನೋಡುತ್ತ) (ಅ. ೧೨) ಇಂದಿಗೆ ಧನ್ಯನಾದೆನು ! ಪರಮೇಷ್ಠಿ ಪ್ರಮುಖರಿಗೂ ದುರ್ಲಭನೆನಿಸಿದ, ದೇವಾದಿದೇವನಾದ, ದಶರಥನಂದನನೆನ್ನಿಸಿ ಬಂದಿರುವ, ಲೀಲಾವಿಭೂತಿಯುಗನಿರತನಾದ-ಈ ರಾಮಭದ್ರನನ್ನು ಕಂಡು ನಾನು ಧನ್ಯನಾದೆನು ! (ಮುಂದೆ ಬಂದು, ಸರ್ವಮಂಗಳ ವಿಗ್ರಹನಾದ ಸ್ವಾಮಿಗೆ, ಮಂಗಳವಾಗಲಿ ! ಸಮಸ್ತ ಕಲ್ಯಾಣಗುಣಪರಿಪೂರ್ಣನಾದ ಪ್ರಭುವಿಗೆ ಕಲ್ಯಾಣವಾಗಲಿ !

ಗೌತಮ :—(ವಿಶ್ವಾಮಿತ್ರನನ್ನು ಕುರಿತು) ಮಹಾತ್ಮನಾದ ವಿಶ್ವಾಮಿತ್ರಮುನಿಯೇ ! ನಿನಗೆ ಸುಸ್ವಾಗತವಷ್ಟೆ ?

ವಿಶ್ವಾ :—ಎಲೈ ಗೌತಮನೆ ! ನಿನ್ನ ಮೈತ್ರಿಯಿಂದ ನನಗೆ ಸುಸ್ವಾಗತವೇಸರಿ ! ನಿನ್ನ ಶಾಸನದಂತೆಯೇ ಆಚರಿಸಿ ಪವಿತ್ರಳಾಗಿರುವ ಈ ಅಹಲ್ಯಾದೇವಿಯನ್ನು ಪರಿಗ್ರಹಿಸಿ, ನಮಗೂ ಸಮಸ್ತ ದೇವತೆಗಳಿಗೂ ಸಂತೋಷವನ್ನುಂಟುಮಾಡಲು ತಡೆಯೇನು !

ಅಹಲ್ಯಾ:—(ಮುಂದೆ ಬಂದು ಗೌತಮನ ಬಳಿಯಲ್ಲಿ ಶಿರಬಾಗಿ ಕೈಜೋಡಿಸಿ) ಸರ್ವಜ್ಞನಾದ ಸ್ವಾಮಿಯೆ! ನಿನ್ನ ವಿರಹದಿಂದಾದ ದುಃಖವನ್ನು ಸಹಿಸಿ, ನಿನ್ನ ಆಜ್ಞೆಯಂತೆಯೇ ತಪಶ್ಚರ್ಯೆಯಲ್ಲಿದ್ದು ನಿನ್ನ ದರ್ಶನೋತ್ಸುಕಳಾಗಿರುವ ನನ್ನನ್ನು ಅನುಗ್ರಹಿಸು ? (ಅ. ೧೩)

ಗೌತಮ :—ನಿನ್ನ ಸ್ಥೈರ್ಯಕ್ಕೂ, ನಿನ್ನ ನಿಷ್ಠೆಗೂ ನಾನು ತನಾಗಿರುವೆನು. ಪರಮಪುರುಷನ ಪೂರ್ಣಾನುಗ್ರಹದಿಂದ ಪರಮಪಾವನೆಯಾದ ನಿನ್ನನ್ನು ಸಂತೋಷದಿಂದ ಪರಿಗ್ರಹಿಸಿರುವೆನು. (ಕೈ ಹಿಡಿಯುವನು.)

|| ಗಗನದಲ್ಲಿ || (ದೇವದುಂದುಭಿಯೊಡನೆ ಪುಷ್ಪವೃಷ್ಟಿಯಾಗುವುದು)

ಗೌತಮ :—(ವಿಶ್ವಾಮಿತ್ರನನ್ನು ನೋಡಿ) ಮಹಾತ್ಮನ ! ಶ್ರೀರಾಮನ ಪ್ರಭಾವದಿಂದ ಲೋಕಕಂಟಕರಾದ ತಾಟಕಿ ಮತ್ತು ಸುಬಾಹು ಪ್ರಮುಖ ರಕ್ಕಸರು ನಿಹತರಾದರು. ಮಾರೀಚನ ದರ್ಪವಡಗಿತು ! ದೇವ—ಗೋ ಭೂದ್ವಿಜರು ಸುರಕ್ಷಿತರಾದರು. ಯಜ್ಞ ಯಾಗಾದಿಕರ್ಮಾಂಗಳಿಗೆ ನಿರ್ವಿಘ್ನತೆಯಾಯ್ತು ! ಸಾನುಜನಾದ ರಾಮಚಂದ್ರನ ಪಾದಧೂಳಿಯಿಂದ ಈ ಪ್ರದೇಶವೆಲ್ಲವೂ ಪವಿತ್ರವಾಯಿತು ! ಪುರುಷಶ್ರೇಷ್ಠನಾದಿವನ ಸಂದರ್ಶನಾನಂದವನ್ನು ಹೊಂದಿ ನಾವೆಲ್ಲರೂ ಕೃತಾರ್ಥರಾದೆವು. ಇಷ್ಟೂ ನಿನ್ನ ಘನತರ ಪ್ರಯತ್ನದ ಫಲವು ! ಆದರೆ ಮುಂದಿನ ಶುಭಕಾರ್ಯಕ್ಕೆ ಸಾವಕಾಶವಿನ್ನೇಕೆ ?

ವಿಶ್ವಾ :—ಯಾವಕಾರ್ಯವು ?

ಗೌತಮ :— ಲೀಲಾಮಾನುಷವಿಗ್ರಹನಾದ ಪರಂಧಾಮನ ವಿರಹದಲ್ಲಿರುವ ಆ ಜಗನ್ಮಾತೆಯಾದ ಜಾನಕೀದೇವಿಯನ್ನು ಪತಿಯ ಪಾರ್ಶ್ವವರ್ತಿನಿಯಾಗಿ ಮಾಡುವ ಕಾರ್ಯವು! (ರಾಮನ ಕೈಹಿಡಿದು) ಅಮಾನುಷ ವ್ಯಾಪಾರನೂ ಅದ್ಭುತಮಹಿಮಾ ಸಂಪನ್ನನೂ, ಅಪಾರಕರುಣಾಸಾಗರನೂ, ಆನಂದದಾಯಕನೂ ಆದ ಹೇ ದಶರಥಸುಕುಮಾರನೇ' ನಿನ್ನ ಧ್ಯಾನದಲ್ಲಿಯೇ ಇರುವ ಆ ಜನಕಸುತೆಯಾದ ಸೀತಾದೇವಿಯನ್ನು ಜಾಗ್ರತೆಯಾಗಿ ಪರಿಗ್ರಹಿಸಿ ಲೋಕಕ್ಷೇಮವನ್ನು ಸಾಧಿಸಬೇಕೆಂದು ಪ್ರಾರ್ಥಿಸುವೆವು. (ಅ. ೧೪)

ರಾಮ:—(ವಿನಯದಿಂದ ಕೈಜೋಡಿಸಿ) ಪೂಜ್ಯರ ಶಾಸನವು ಅನುಲ್ಲಂಘ್ಯವು ! ಕೇವಲ ದಶರಥಪುತ್ರನಾಗಿರುವ ನನ್ನನ್ನು ಪರಮಾತ್ಮನೆಂದು ಸ್ತುತಿಸುತ್ತಿರುವ ತಮ್ಮ ವಿಶ್ವಾಸವೂ ಆದರೋಪಚಾರಗಳೂ ಪರಮಾತ್ಮನಿಗೆ ಸಮರ್ಪಕವಾಗಲಿ. ಸಾನುಜನಾಗಿ ಪೂಜ್ಯರಿಗೆ ನಮಿಸುವೆನು !

ಗೌತಮ :—ನರರೂಪವನ್ನೆತ್ತಿದ ನಿನಗೀ ನಟನೆಯು ತಕ್ಕುದೇ ಸರಿ ! ಸಾನುಜನಾದ ನೀನಿನ್ನು ವಿಶ್ವಾಮಿತ್ರನೊಡನೆ ಮಿಥಿಲಾನಗರದಲ್ಲಿರುವರೆಲ್ಲರನ್ನೂ ಆನಂದಪಡಿಸು. ನಾವಿನ್ನು ತಪಸ್ಸಿಗೆ ತೆರಳುವೆವು ?

(ಅಹಲ್ಯೆಯಕಡೆಗೆ ತಿರುಗಿ) ಆರ್ಯೆ ! ನಿನ್ನ ಪುತ್ರನಿಂದೊಡಗೂಡಿದ ಮಿಥಿಲಾಧೀಶನೂ ಸಪರಿವಾರನಾಗಿ, ಈ ಪುರುಷೋತ್ತಮನನ್ನು ಸೇವಿಸಿ ಧನ್ಯನಾಗಲಿ

ಅಹಲ್ಯಾ :—(ರಾಮಲಕ್ಷ್ಮಣರಿಗೆ ಕೈಜೋಡಿಸಿ) ಸುಕುಮಾರರೇ ! ನಮ್ಮೀ ಅಭಿಲಾಷೆಯನ್ನು ನಡೆಯಿಸಿಕೊಡುವಿರಷ್ಟೆ? (ವಿಶ್ವಾಮಿತ್ರರಿಗೆಕೈಮುಗಿದು) ಮಹಾತ್ಮರೇ ! ಅನುಗ್ರಹಿಸಬೇಕು.

ಇಂತು ಚತುರ್ಥಾಂಕಂ.



|| ಶ್ರೀಃ ||

# ಪಂಚಮಾಂಕಂ

---

|| ಕಂದ || ಜಯ ಜಗದೀಶನೆ ರಾಮನೆ |
ಜಯ ಜನಕಸುತಾಮನೋಹರನೆ ರಘುವರನೇ ||
ಜಯ ಭಕ್ತಪರಾಧೀನನೆ |
ಜಯ ಜಯ, ಶಿವಚಾಪಖಂಡನನೆ, ಸುರನುತನೆ ||

## ಜನಕಮಹಾರಾಯನ ಯಾಗಶಾಲೆ.

[ಜನಕಮಹಾರಾಯನು ಋತ್ವಿಕ್ಪುರೋಹಿತರೇ ಮೊದಲಾದ ಋಷಿಗಳೊಡನೆ ಯಜ್ಞವೇದಿಕೆಯ ಮುಂದೆ ಕುಳಿತಿರುವನು]

ವಟು :—(ಓಡಿಬಂದು) ಯಜಮಾನನಾದ ಜನಕಮಹಾರಾಯನಿಗೆ ಜಯವಾಗಲಿ! ಮಹಾನುಭಾವರಾದ ವಿಶ್ವಾಮಿತ್ರರು ಯಜ್ಞಶಾಲೆಯಲ್ಲಿ ಬಂದಿಳಿದುಕೊಂಡಿರುವರು.

ಜನಕ :—(ಥಟ್ಟನೆದ್ದು) ಏನು ? ವಿಶ್ವಾಮಿತ್ರರು ಬಂದಿರುವರೇ ? [ಶತಾನಂದನನ್ನು ಕುರಿತು] ಪೂಜ್ಯರೆ! ಮಹಾನುಭಾವರಾದ ವಿಶ್ವಾಮಿತ್ರರು ಬಂದಿರುವರಂತೆ, ಅವರನ್ನು ಸನ್ಮಾನಪೂರ್ವಕವಾಗಿ ಕರೆದುಕೊಂಡುಬರಬೇಕು.

ಶತಾ :—(ಸಂತೋಷದಿಂದ) ಹಾಗಾದರೆ ನಮ್ಮ ಯಜ್ಞವು ಸಾಫಲ್ಯವಾಯಿತು! ಈಗಲೇ ಆ ಮಹಾತ್ಮನನ್ನು ಸತ್ಕರಿಸಿ ಕರೆದುಕೊಂಡು ಬರುವೆನು. (ಪಕ್ಕಕ್ಕೆ ತಿರುಗಿ) ಏಳಿರಿ, ಋತ್ವಿಕ್ಪುರೋಹಿತರೆ! ಅರ್ಘ್ಯಪಾದ್ಯಾದಿಗಳೊಡನೆ ಹೋಗಿ, ಅವರನ್ನು ಸತ್ಕರಿಸಿ ಕರತರುವ-

(ಋತ್ವಿಕ್ಪುರೋಹಿತರು ಎದ್ದು ಪೂಜಾಸಾಮಗ್ರಿಗಳೊಡನೆ ಶತಾನಂದನ ಜೊತೆಯಲ್ಲಿ ಹೋಗುವರು.)

ಜನಕ :—(ಸಮಾಧಾನದಿಂದ-ಸಚಿವನಕಡೆಗೆ ತಿರುಗಿ) ಅಮಾತ್ಯವರ ! ಸಾಧುಜನಶಿರೋಮಣಿಯಾದ ವಿಶ್ವಾಮಿತ್ರನ ಆಗಮನ ವಾರ್ತಾ ಶ್ರವಣಮಾತ್ರದಿಂದಲೇ ನನ್ನಮನಸ್ಸು, ಅತ್ಯಾನಂದಹೊಂದಿರುವುದು ! ಇನ್ನಾತನ ಸಂದರ್ಶನವಾದರೆ ಹೇಳುವುದೇನು ? [ಅ. ೧]
(ತೆರೆಯುಕಡೆ ನಿರೀಕ್ಷಿಸುವನು)

ಸಚಿವ :—ವಿಶ್ವಾಮಿತ್ರರ ಪ್ರಭಾವವೇ ಅಂತಹದು.

|| ತೆರೆಯಲ್ಲಿ || ಇತ್ತ-ಇತ್ತ, ಬರಬೇಕು !

ಜನಕ :—(ಅವಸರದಿಂದ ಮುಂದಕ್ಕಡಿಯಿಡುವನು)

(ರಾಮಲಕ್ಷ್ಮಣಸಹಿತನಾದ ವಿಶ್ವಾಮಿತ್ರನು ಶತಾನಂದನೇ ಮೊದಲಾದವರೊಡನೆ ಬರುವನು)

ಜನಕ :—(ಕೈಜೋಡಿಸಿ) ಪೂಜ್ಯರಿಗೆ ನಮಸ್ಕಾರವು ! ತ್ರಿಲೋಕವಿದಿತ-ವಿಖ್ಯಾತ-ಪ್ರಭಾವರಾದ ತಮ್ಮ ಆಗಮನದಿಂದ ನಾನು ಧನ್ಯನಾದೆನು ; ಪಾವನಾತ್ಮರ ಪಾದರಜಃಸ್ಪರ್ಶದಿಂದ ಈ ಯಜ್ಞಶಾಲೆಯು ಪಾವನವಾಯ್ತು ! ಪೂರ್ಣಕಾಮರಾದ ಪ್ರಚಂಡಶಾಸನರಾದ ತಮ್ಮ ಕೃಪಾಕಟಾಕ್ಷವಾದುದರಿಂದ ನನ್ನ ಯಜ್ಞವೂ-ಪರಿಪೂರ್ಣವೆನ್ನಿಸಿತು; ನನ್ನ ಉದ್ದೇಶವೂ ಸಿದ್ಧಿಯಾಯ್ತು ! ವ್ರತವೂ ಸಾಂಗವೆನ್ನಿಸಿತು. ಶ್ರಮವೂ ಸಾರ್ಥಕವಾಯಿತು ! [ಅ. ೨.]

ವಿಶ್ವಾ :—ಜ್ಞಾನನಿಧಿಯಾದ ಜನಕಮಹಾರಾಯನೇ ! ಸುಕೃತಶಾಲಿಯಾದ ನಿನ್ನ ಸರ್ವಾಭೀಷ್ಟಗಳೂ ಸರ್ವಶಕ್ತನಾದ ಶ್ರೀಹರಿಯ ಅನುಗ್ರಹದಿಂದ ಸಿದ್ಧಿಯಾಗುವುದು !

ಜನಕ :—ಪೂಜ್ಯರೆ ! ಸುಖಾಸೀನರಾಗಿ ನಮ್ಮೆಲ್ಲರನ್ನೂ ಅನುಗ್ರಹಿಸಬೇಕು.

ವಿಶ್ವಾ :—(ಯಜ್ಞವೇದಿಕೆಯ ಪಕ್ಕದಲ್ಲಿದ್ದ ಆಸನದಲ್ಲಿ ಕುಳಿತು) ಎಲೈ ಭಾಗ್ಯಶಾಲಿಯಾದ ಜನಕಮಹಾರಾಯನೇ ! ಸಪರಿವಾರನಾಗಿ

ನೀನೂ ಕುಳಿತುಕೋ ! (ಪಕ್ಕಕ್ಕೆ ತಿರುಗಿ) ಸುಕುಮಾರರೇ ! ನೀವೂ ಕುಳಿತುಕೊಳ್ಳಿರಿ !

ರಾಮ
ಲಕ್ಷ್ಮಣ } :--(ವಿಶ್ವಾಮಿತ್ರನ ಪಾರ್ಶ್ವದಲ್ಲಿದ್ದ ಆಸನಗಳಮೇಲೆ ಕುಳಿತುಕೊಳ್ಳುವರು.)

ಜನಕ :—(ರಾಮಲಕ್ಷ್ಮಣರನ್ನು ನೋಡಿ, ಕೌತುಕದಿಂದ) ಆಹಾ! ಯಾರಿವರು? ಲೋಕಮೋಹನಾಕೃತಿಯನ್ನು ತಾಳಿ, ಸಕಲ ರಾಜ ಲಕ್ಷಣಗಳಿಂದೊಪ್ಪಿ, ಸಾರ್ವಭೌಮಪದವಿಗೆ ಅರ್ಹರಾಗಿ ರಾರಾಜಿಸುತ್ತಿರುವ ಈ ಸುಕುಮಾರರಾರು ? ಇವರನ್ನು ನೋಡಿದ ನನ್ನ ದೃಷ್ಟಿಯು ಇವರಲ್ಲೇ ನೆಟ್ಟುಹೋಗಿರುವುದು ! ಮನಸ್ಸು ಇವರ ವಿಷಯದಲ್ಲಿ ಅನಿರ್ವಚನೀಯವಾದ ಪ್ರೇಮವನ್ನು ತಾಳಿರುವುದು ! ಇರಲಿ, ಕೇಳುವೆನು || ಪ್ರಕಾಶವಾಗಿ || (ವಿಶ್ವಾಮಿತ್ರನನ್ನು ಕುರಿತು) ಪೂಜ್ಯರೇ ! ಆಜಾನುಬಾಹುಗಳೂ, ಅರವಿಂದದಳಾಯತಾಕ್ಷರೂ, ತೇಜೋವಿರಾಜಮಾನರೂ, ಮಂದಸ್ಮಿತಮುಖಾರವಿಂದರೂ ಆಗಿರುವ ಈ ಸುಕುಮಾರರಾರು ? ಇವರ ನಾಮಗಳೇನು ? ಇವರನ್ನು ಪಡೆದ ಭಾಗ್ಯಶಾಲಿಗಳಾದ ಜನನೀಜನಕರಾರು ? ಧನುಷ್ಪಾಣಿಗಳಾಗಿ, ಶೌರ್ಯವೇ ಮೂರ್ತೀಭವಿಸಿದಂತೆ ಪ್ರಕಾಶಿಸುವ ಈ ಬಾಲಕರು ಪಾದಚಾರಿಗಳಾಗಿ ತಮ್ಮೊಡನೆ ಇಷ್ಟುದೂರ ಬಂದಿರುವಕಾರಣವೇನು ? (ಅ ಇ.)

ವಿಶ್ವಾ : – (ರಾಮಲಕ್ಷ್ಮಣರನ್ನು ನೋಡಿ ಆನಂದದಿಂದ-ಜನಕನಕಡೆಗೆ ತಿರುಗಿ) ವಿವೇಕಶಾಲಿಯಾದ ವಿದೇಹರಾಜನೇ ! ಋತ್ವಿಕ್ಪುರೋಹಿತರೊಡನೆ ಕುಳಿತು, ಸಾವಧಾನದಿಂದ ಕೇಳಿದೆಯಾದರೆ, ಆನಂದದಾಯಕವಾದ ಈ ಬಾಲಕರ ದಿವ್ಯಚರಿತವನ್ನು ವಿವರಿಸುವೆನು.

ಜನಕ :—(ಎಲ್ಲರೊಡನೆ ವಿಶ್ವಾಮಿತ್ರನ ಬಳಿಯಲ್ಲಿ ಕುಳಿತುಕೊಳ್ಳುವನು.)

ಶತಾ :—ಮಹಾತ್ಮರೇ ! ದಯೆಯಿಟ್ಟು- ಈ ಬಾಲಕರ ದಿವ್ಯ ಚರಿತವನ್ನು ವಿವರಿಸಬೇಕು !

ವಿಶ್ವಾ :—ಈ ಸುಕುಮಾರರು ದಶರಥಮಹಾರಾಜನ ಪುತ್ರರು. (ರಾಮನನ್ನು ತೋರಿಸಿ) ಈತನೇ-ಕೌಸಲ್ಯಾಗರ್ಭಸಂಜಾತನೂ ತಾಟಕೀ ಸುಬಾಹುಪ್ರಮುಖ ದಾನವಮಥನನೂ ಆದ ಶ್ರೀರಾಮನು. (ಲಕ್ಷ್ಮಣ ನನ್ನು ತೋರಿಸಿ) ಈತನೇ ಅಣ್ಣನಾದ ರಾಮಚಂದ್ರನನ್ನೇ ಅನುಸರಿಸು ವವನೂ, ಶಾಂತಹೃದಯನೂ ಸಾಧ್ವೀಶಿರೋಮಣಿಯಾದ ಸುಮಿತ್ರಾ ನಂದನನೂ ಆದ ಲಕ್ಷ್ಮಣನು [ಅ. ಳ.] ಇವರೀರ್ವರೂ ನನ್ನ ಯಾಗ ಸಂರಕ್ಷಣೆಗಾಗಿ ಬಂದಿದ್ದರು; ಇಲ್ಲಿ ನೀನು ಮಹಾಯಾಗವನ್ನು ಮಾಡು ವುದಾಗಿಯೂ ಅದನ್ನು ನೋಡಬೇಕೆಂಬದಾಗಿಯೂ ಋಷಿಗಳು ಪ್ರಾರ್ಥಿ ಸಿದುದರಿಂದ ಇವರೀರ್ವರೂ ನನ್ನೊಡನೆ ಇಲ್ಲಿಗೆ ಬಂದರು.

ಜನಕ :—|| ಸ್ವಗತಂ || ಏನು ಏನು ? ಈ ಬಾಲಕರು ಯಾಗ ಸಂರಕ್ಷಣೆಗೆ ಬಂದಿದ್ದರೇ ? ಆಶ್ಚರ್ಯಮಾಶ್ಚರ್ಯವು ! || ಪ್ರಕಾಶಂ || ಪೂಜ್ಯರೇ ! ಅತ್ಯಂತ ಕೌತುಕ ಜನಕವಾದ ವೃತ್ತಾಂತವು ! ಈ ಬಾಲ ಮೋಹನ ಮೂರ್ತಿಗಳು ತಮ್ಮ ಯಾಗಸಂರಕ್ಷಣೆಗಾಗಿ ಬಂದಿದ್ದರೇ ! ಯಾಗವು ಪೂರ್ತಿಯಾಯಿತೇ ?

ವಿಶ್ವಾ :—(ನಸುನಗುತ್ತ) ಪುಣ್ಯಶಾಲಿಯೇ ! ಕೇಳುಕೇಳು ! ಲೋಕಭಯಂಕರರೂ ರಾವಣನ ಕಡೆಯವರೂ ಆದ ಮಾರೀಚಾದಿ ಕ್ರೂರ ರಕ್ಕಸರ ಉಪಟಳವನ್ನು ಸಹಿಸಲಾರದೆ, ದಶರಥನನ್ನು ಬಹುಪ್ರ ಯಾಸದಿಂದ ಒಪ್ಪಿಸಿ, ಈ ಸುಕುಮಾರರನ್ನು ಕರೆದುಕೊಂಡು ಬಂದೆನು. (ಋಷಿಗಳೆಲ್ಲರೂ ಕುತುಹಲಾವಿಷ್ಟರಾಗಿ ಕೇಳುವರು )

ಜನಕ :—ಆಮೇಲಾಮೇಲೆ ?

ವಿಶ್ವಾ:—ಅಲ್ಲಿ, ಮಾರ್ಗನಿರೋಧಕಳಾಗಿ ಬಂದ ತಾಟಕಿಯನ್ನು ಈ ಸುಕುಮಾರರು ನಿಗ್ರಹಿಸಿ ದೇವತೆಗಳಿಂದ ಸಂಸ್ತುತರಾದರು. ಆ ಬಳಿಕ

ನನ್ನಿಂದ ಸಕಲ ಶಸ್ತ್ರಾಸ್ತ್ರಗಳ ಪ್ರಯೋಗೋಪಸಂಹಾರ ಮಂತ್ರಗಳನ್ನೂ ಪಡೆದು ಧರ್ಮರಕ್ಷಣದೀಕ್ಷಾಬದ್ಧರಾಗಿ ನಡೆತಂದರು.

ಜನಕ :—(ವಿಸ್ಮಯದಿಂದ) ಆಶ್ಚರ್ಯವಾಶ್ಚರ್ಯವು ! ಅಜೇಯಳೆಂದು ಹೆಮ್ಮೆಗೊಂಡಿದ್ದ ತಾಟಕಿಯನ್ನು ಲೀಲಾಜಾಲವಾಗಿ ಸಂಹರಿಸಿದ ಈ ಬಾಲರು ಭಗವದವತಾರವಾಗಿರಬೇಕೇ ಹೊರತು ಮಾನವರಲ್ಲ ಪೂಜ್ಯರೇ ! ಆ ಬಳಿಕ ?

ವಿಶ್ವಾ :—ಆ ಬಳಿಕ ಹೇಳುವುದೇನು ! ಸಾನುಜನಾದ ಶ್ರೀರಾಮನ ಪ್ರತಾಪದಿಂದ ಮಾರೀಚನು ಶಿಕ್ಷಿತನಾಗಿ ಕಂಗೆಟ್ಟು ಕಾಡುಪಾಲಾಗಿ ಹೋದನು. ಸುಬಾಹುವು ಸಪರಿವಾರನಾಗಿ ನಾಶವಾದನು ! ದೇವತೆಗಳೂ, ಗೋಬ್ರಾಹ್ಮಣರೂ ನಿಶ್ಚಿಂತರಾದರು. ಯಜ್ಞಯಾಗಂಗಳು ನಿರ್ವಿಘ್ನಂಗಳೆನ್ನಿಸಿದುವು. [ಅ. ೫೪.]

(ಸರ್ವರೂ ಆನಂದಬಾಷ್ಪಗಳನ್ನು ಸುರಿಸುತ್ತ ನೋಡುವರು)

ಶತಾ :—|| ಸ್ವಗತಂ || ಏನಿದು ! ಅಪ್ರತಿಮ ಪ್ರಭಾವರಾದ ಈ ಬಾಲರ ಅತಿಮಾನುಷ ವ್ಯಾಪಾರಗಳನ್ನು ಕೇಳುತ್ತಿದ್ದಂತೆ, ನನ್ನೀ ಹೃದಯವೂ ತವಕಗೊಳ್ಳುತ್ತಿರುವುದು ! ಶುಭಶಕುನಗಳೂ ನನಗೆ ಶುಭೋದಂತವನ್ನು ಕೇಳುವೆನೆಂದು ಸೂಚಿಸುವುದು. ಇವರಿಂದ ಅತ್ಯುಪಕೃತನಾಗಿರುವಂತೆ ಆತ್ಮಸಮಾಧಾನವುಂಟಾಗಿ ಇವರಲ್ಲಿ ನನಗೆ ಅವ್ಯಾಜವಾದ ಪ್ರೇಮವುತ್ಪನ್ನವಾಗುತ್ತಿರುವುದು. ಇದಕ್ಕೆ ಕಾರಣವೇನಿರಬಹುದು ?

ವಿಶ್ವಾ:—ಎಲೈ, ಶತಾನಂದನೆ! ನೀನು ಯಾವವಿಚಾರದಲ್ಲಿರುವೆ

ಶತಾ :—ಪೂಜ್ಯರೇ ! ತಾವು, ಇಲ್ಲಿಗೆ ಬರುತ್ತಾ ಯಾವ ಮಾರ್ಗವಾಗಿ ಬಂದಿರೋ ಅದನ್ನು ತಿಳಿಯಬೇಕೆಂದಿರುವೆನು !

ವಿಶ್ವಾ :—ಇಕ್ಷ್ವಾಕುಕುಲಸಂಭೂತನಾದ ಸುಮತಿಮಹಾರಾಜನ ನಗರವನ್ನು ಹೊಕ್ಕು ಅಲ್ಲಿಂದ ಗೌತಮರ ಆಶ್ರಮಪ್ರಾಂತದ ಮೇಲಿಂದಲೇ ಬಂದೆವು.

ಶತಾ :—(ಕುತೂಹಲಾಧಿಕ್ಯದಿಂದ) ಮಹಾತ್ಮನೇ ! ಶ್ರೀರಾಮನು ನನ್ನ ಜನನಿಗೆ ದರ್ಶನವಿತ್ತನೇ ? ಜನನಿಯು ತಪಸ್ಸಿದ್ಧಿಯಾಯಿತೇ?

ವಿಶ್ವಾ :—ಪುಣ್ಯಶಾಲಿಯೇ! ತಪಸ್ವಿನಿಯಾದ ನಿನ್ನ ಜನನಿಯು ಶ್ರೀ ರಾಮಚಂದ್ರನ ದರ್ಶನದಿಂದ ಪರಿಶುದ್ಧಳಾಗಿ ಪ್ರಕಾಶಿಸಿದಳು; ತಪಸ್ಸಿದ್ಧಿಹೊಂದಿ ದೇವತೆಗಳಿಂದ ಕೊಂಡಾಡಲ್ಪಟ್ಟಳು.

ಶತಾ:—(ಆನಂದ ಬಾಷ್ಪಾಕುಲಿತಲೋಚನನಾಗಿ ಕೈಜೋಡಿಸಿ) ಪೂಜ್ಯರೇ! ತಮ್ಮ ಅನುಗ್ರಹದಿಂದ ನಾನಿಂದು ಶುಭೋದಂತವನ್ನು ಕೇಳಿದೆನು. ಆದರೆ, ನನ್ನ ಜನನಿಯು-ಸಾನುಜನಾದ ಈ ರಘುವೀರನನ್ನು ಸರಿಯಾಗಿ ಸತ್ಕರಿಸಿದಳೇ ? ನಮ್ಮ ಜನಕನು ರಾಮಲಕ್ಷ್ಮಣರಿಂದ ಸನ್ಮಾನಿಸಲ್ಪಟ್ಟನೇ ? ನನ್ನ ಜನನಿಯು ಪತಿಯ ಪೂರ್ಣಾನುಗ್ರಹಕ್ಕೆ ಪಾತ್ರಳಾದಳೇ? ನಮ್ಮ ಜನನೀ ಜನಕರು ನನಗೇನುಹೇಳಿದರು ? [ಅ.೬ ]

ವಿಶ್ವಾ :—ಎಲೈ ಜನನೀ-ಜನಕ ಭಕ್ತನಾದ ಶತಾನಂದನೇ ! ನೀನಾವ ವಿಧವಾದ ಚಿಂತೆಯನ್ನೂ ಮಾಡಬೇಕಾಗಿಲ್ಲ. ನಿನ್ನ ಜನನಿಯು ಸಾನುಜನಾದ ರಾಮಚಂದ್ರನನ್ನೂ, ನನ್ನನ್ನೂ ಸತ್ಕರಿಸಿ, ಪತಿಯ ಪೂರ್ಣಾನುಗ್ರಹಕ್ಕೆ ಪಾತ್ರಳಾದಳು. ನಿನ್ನ ಜನಕನೂ ನಮ್ಮನ್ನು ಆದರಿಸಿ ಪತ್ನಿಯನ್ನು ಪರಿಗ್ರಹಿಸಿ, ಸಂತೈಸಿ ತಪಶ್ಚರ್ಯೆಯಲ್ಲಿ ತತ್ಪರನಾದನು. ನಿನಗೆ ಜನಕಮಹಾರಾಯನೇ ಮೊದಲಾದವರೊಡನೆ, ಪುರುಷೋತ್ತಮನಾದ ರಾಮಚಂದ್ರನ ಪರಮಮಂಗಳ ಮೂರ್ತಿಯನ್ನು ಸಂದರ್ಶಿಸಿ, ಸೇವಿಸಿ ಕೃತಕೃತ್ಯರಾಗುವದೆಂದು ಹೇಳಿದರು.

ಶತಾ :—(ಆನಂದಪರವಶನಾಗಿ ರಾಮಲಕ್ಷ್ಮಣರ ಕೈಗಳನ್ನು ಹಿಡಿದು) [ಅ. ೭ ] ಪತಿತಪಾವನನಾದ ರಾಮಚಂದ್ರನೇ! ಪಾಪನಾಶನನಾದ-ಪ್ರಪನ್ನಜನಪರಿತ್ರಾಣನಾದಪರಮಪುರುಷನೇ! ಮುನಿಜನಮಾನಸಹಂಸನಾದ ರಾಘವನೇ ! ಸುರವೈರಿ ಭಯಂಕರನಾದ- ಜಗನ್ಮೋಹನಾಕಾರನಾದ ದಶರಥವರಸುಕುಮಾರನೇ ! ನಿನ್ನ ಪರಮಾನುಗ್ರಹದಿಂದ

ನನ್ನ ಜನನಿಯೂ ಉದ್ಧೃತೆಯಾದಳು. ನನ್ನ ಜನಕನ ತಪಸ್ಸಿದ್ಧಿಯಾಯ್ತು! ಜನನೀ ಜನಕರ ಶುಭೋದಂತವನ್ನು ಕೇಳಿದ ನಾನೂ ಧನ್ಯನಾದೆನು.

ರಾಮ:—(ನಮ್ರತೆಯಿಂದ) ಬ್ರಾಹ್ಮಣೋತ್ತಮರೇ! ತಮ್ಮ ವಿಶ್ವಾಸವೇ ನಮ್ಮನ್ನು ಅಭ್ಯುದಿತರಾಗಿ ಮಾಡುತ್ತಿರುವುದು.

ಶತಾ:—ಎಲೈ ಲೋಕಾಭಿರಾಮನಾದ ರಾಮಚಂದ್ರನೇ! ನನಗೆ ಈ ಶುಭವರ್ತಮಾನವನ್ನು ತಂದಿತ್ತ ಮಹಾನುಭಾವನಾದ ಈ ಕೌಶಿಕನೇ ನಿನ್ನ ಸಮಸ್ತ ಶ್ರೇಯಸ್ಸುಗಳಿಗೂ ಕಾರಣನಾಗಿರುವುದರಿಂದ ಈತನ ಅದ್ಭುತ ಚರಿತ್ರವನ್ನು ವಿವರಿಸುವೆನು ಕೇಳು!

ರಾಮ:—ಸಾನುಜನಾಗಿ, ಕೇಳುವೆನು; ವಿವರಿಸಬೇಕು.

ಶತಾ:—ಎಲೈ ರಘುವೀರನೇ! ಈ ಮಹಾನುಭಾವನ ವಂಶವು ಪರಮ ಪಾವನವಾದುದು; ಎಂದರೆ ಸಾಕ್ಷಾತ್ ಬ್ರಹ್ಮನ ಪುತ್ರನಾದ ಕುಶನಿಗೆ ಪ್ರಪೌತ್ರನೂ ಕುಶನಾಭನ ಪೌತ್ರನೂ ಗಾಧಿಯ ಪುತ್ರನೂ-ಆಗಿ ರಾಜಕುಲ ಲಲಾಮನೆನ್ನಿಸಿ ಬಹುಕಾಲ ಪ್ರಜಾರಂಜನ ಮಾಡುತ್ತಿದ್ದ ಈತನು, ತಪೋಗರಿಷ್ಠರಾದ ವಸಿಷ್ಠರಲ್ಲಿದ್ದ ಕಾಮಧೇನುವಿನ ನಿಮಿತ್ತದಿಂದ ಕ್ಷಾತ್ರಧರ್ಮದಲ್ಲಿ ಜಿಹಾಸೆ ಹೊಂದಿ ಬ್ರಹ್ಮರ್ಷಿಯಾದನು!

ಲಕ್ಷ್ಮಣ.—ಪೂಜ್ಯರೇ! ಕ್ಷತ್ರಿಯನಾಗಿ ಪ್ರಜಾಪರಿಪಾಲನ ಮಾಡುತ್ತಿದ್ದವನು ಪ್ರಭುತ್ವವನ್ನು ಬಿಟ್ಟು ಬ್ರಾಹ್ಮಣ್ಯವನ್ನು, ಪಡೆದುದು ಹೇಗೆ? ಕುತೂಹಲ ಜನಕವಾದ ಈ ವೃತ್ತಾಂತವನ್ನು ವಿವರವಾಗಿ ತಿಳಿಸಬೇಕು.

ಶತಾ:—(ಉತ್ಸಾಹಿತನಾಗಿ) ಕೇಳಿರಿ, ಮಾರ್ಗಾಯಾಸದಿಂದೊಮ್ಮೆ ವಸಿಷ್ಠರ ಆಶ್ರಮಕ್ಕೈದಿದ ಕೌಶಿಕರಾಜನನ್ನು ವಸಿಷ್ಠರು ಆತಿಥ್ಯದಿಂದ ಸತ್ಕರಿಸಿ ತಮ್ಮ ಹೋಮಧೇನುವಾದ ಕಾಮದುಘೆಯ ಪ್ರಭಾವದಿಂದ ಸಪರಿವಾರನಾದ ರಾಜನಿಗೆ ಯಥೇಚ್ಛವಾದ ಭೋಜನೋ

ಪಚಾರಗಳಿಂದ ತೃಪ್ತಿಯುಂಟುಮಾಡಿದನು. ಅಂತಹ ಮಹಿಮಾನ್ವಿತವಾದ ಧೇನುವನ್ನು ತನಗೆ ಕೊಡಬೇಕೆಂದು ಈತನು ಬಹು ಬಗೆಯಾಗಿ ಕೇಳಿದನು. ವಸಿಷ್ಠರು ಕೊಡಲಿಲ್ಲವಾದುದರಿಂದ ಧೇನುವನ್ನು ಬಲಾತ್ಕಾರದಿಂದ ಎಳೆದೊಯ್ಯಲು ಸೇವಕರಿಗೆ ಕಟ್ಟುಮಾಡಿದನು.

ರಾಮ:—ಆಮೇಲಾಮೇಲೆ ?

ಶತಾ:—ಸಂತಪ್ತಳಾದ ಕಾಮಧೇನುವು ಬಂದು ವಸಿಷ್ಠರಲ್ಲಿ ಪ್ರಾರ್ಥಿಸಿ ಅವರ ಅನುಮತಿಯನ್ನು ಹೊಂದಿ, ತನ್ನ ' ಹುಂಕಾರ ' ದಿಂದಲೂ ಪಾದಸಂಘಟ್ಟನದಿಂದಲೂ ಅನೇಕಾನೇಕಮ್ಲೇಂಛ-ಯವನ-ಶಕರೇ ಮೊದಲಾದ ವೀರಭಟರನ್ನು ನಿರ್ಮಿಸಿದಳು. ಅವರಮುಂದೆ ನಿಲ್ಲಲಾರದೆ ಕೌಶಿಕರಾಜನ ಸೈನ್ಯವು ಲಯವಾಗಲು, ರಾಜನು ಸಂತಪ್ತನಾಗಿ ಬಂದು ಅವರೆಲ್ಲರನ್ನೂ ನಿಗ್ರಹಿಸುತ್ತಿರುವಾಗ-ಇವನ ಪುತ್ರರು ಸಸೈನ್ಯರಾಗಿ ಬಂದು ವಸಿಷ್ಠರಮೇಲೆ ಬಿದ್ದು ಆ ಮಹಾನುಭಾವನ ಹುಂಕಾರದಿಂದಲೇ ಎಲ್ಲರೂ ಹತರಾದರು. ಆತನ ಕೋಪದಿಂದ ಕೌಶಿಕರಾಜನು ಹತವೀರ್ಯನಾಗಿ ಲಜ್ಜೆಯಿಂದ ಅಲ್ಲಿ ನಿಲ್ಲದೆ ಹೊರಟುಹೋದನು !

ರಾಮ :—ವಸಿಷ್ಠರಪ್ರಭಾವವೇ ಅಂತಹುದು ! ಹಾಗೆ ಪರಾಜಿತನಾದ ಕೌಶಿಕರಾಜನು ಮುಂದೆ ಏನು ಮಾಡಿದನು ?

ಶತಾ :—ಬಹುಕಾಲ ಘೋರವಾದ ತಪಸ್ಸನ್ನಾಚರಿಸಿ, ಪ್ರತ್ಯಕ್ಷನಾದ ರುದ್ರನಿಂದ ಸಕಲ ಶಸ್ತ್ರಾಸ್ತ್ರಗಳೂ ಸಮಸ್ತವಾದ ಧನುರ್ವೇದವೂ ರಹಸ್ಯಾ ಮಂತ್ರಾರ್ಥಗಳೊಡನೆ ತನಗೆ ವಶವಾಗುವಂತೆ ವರವನ್ನು ಪಡೆದು, ಮತ್ತೆ ಬಂದು ವಸಿಷ್ಠರನ್ನು ಕೆಣಕಿ, ವಸಿಷ್ಠಾಶ್ರಮದಲ್ಲಿದ್ದ ಋಷಿಗಳೆಲ್ಲರನ್ನೂ ತಲ್ಲಣಗೊಳಿಸಿದನು.

ಲಕ್ಷ್ಮಣ :—ಅಬ್ಬ ! ಕೌಶಿಕರಾಜನ ಕ್ಷಾತ್ರತೇಜವು ಅದ್ಭುತವಾದುದು.

ಶತಾ :—ನಿಜ ; ಆದರೆ, ಕುಪಿತನಾಗಿ ಮುಂದೆ ನಿಂತ ವಸಿಷ್ಠನ ಬ್ರಹ್ಮದಂಡದ ಮುಂದೆ ಕೌಶಿಕನ ಕ್ಷಾತ್ರತೇಜವು ನಿಲ್ಲದಂತಾಯಿತು ! ಆತನಿಂದ ಬಿಡಲ್ಪಟ್ಟ ಸಕಲವಿಧವಾದ ಶಸ್ತ್ರಾಸ್ತ್ರಗಳೂ, ಶಕ್ತಿ-ಚಕ್ರಾಯುಧ-ಮುಸಲಾಯುಧಗಳೂ ಬ್ರಹ್ಮದಂಡದಿಂದ ಕಬಳಿಸಲ್ಪಟ್ಟವು. ಕಡೆಗೆ, ಬ್ರಹ್ಮಾಸ್ತ್ರವನ್ನು ಕೂಡ, ವಸಿಷ್ಠನ ಬ್ರಹ್ಮದಂಡವು ನುಂಗಿಬಿಟ್ಟಿತು. ಈತನು ನೋಡುತ್ತಿರುವಂತೆಯೇ ಬ್ರಹ್ಮಾಸ್ತ್ರವನ್ನು ನುಂಗಿ, ಉರಿಯನ್ನುಗುಳುತ್ತಲಿರುವ ಬ್ರಹ್ಮದಂಡವನ್ನು ಹಿಡಿದು, ಜಾಜ್ವಲ್ಯಮಾನನಾಗಿರುವ ವಸಿಷ್ಠನು, ದೇವ ಋಷಿಗಳಿಂದ ಪ್ರಾರ್ಥಿತನಾಗಿ ಸಕಲ, ಪ್ರಾಣಿಗಳ ಭಯವನ್ನೂ ಪರಿಹರಿಸಲು ಆ ತೇಜಸ್ಸನ್ನು ಕ್ಷಣಮಾತ್ರದಲ್ಲಿ ತನ್ನಲ್ಲಿಯೇ ಅಡಗಿಸಿಕೊಂಡು, ಮಂದಸ್ಮಿತನಾಗಿ ಸರ್ವರನ್ನೂ ಸಂತೈಸಿದನು. ಇದೆಲ್ಲವನ್ನೂ ನೋಡಿ ಕೌಶಿಕನು ಕ್ಷಾತ್ರಬಲಕ್ಕಾಗಿ ಧಿಕ್ಕಾರಮಾಡಿ, ಬ್ರಹ್ಮಬಲವನ್ನು ಹೊಂದಲೇಬೇಕೆಂದು ಸಂಕಲ್ಪಿಸಿ, ಅಲ್ಲಿ ನಿಲ್ಲದೆ ತಪಸ್ಸಿಗಾಗಿ ಹೊರಟುಹೋದನು.

ರಾಮ :—ಲೋಕಮಾನ್ಯರಾದ ವಸಿಷ್ಠರ ಬ್ರಾಹ್ಮಣ್ಯವೂ, ಕೌಶಿಕನ ಶೌರ್ಯ ಧೃಢಮನಸ್ಥೈರ್ಯವೂ ಸಕಲಜನ ಚಿತ್ತಾಕರ್ಷಕವಾದುದು !

ಶತಾ :— ರಘುವೀರನೇ ! ಕೇಳು; [ಬಿ. ಬ.] ಹೀಗೆ ತಪಸ್ಸಿಗೆ ತೆರಳಿದ ಈ ಮಹಾತ್ಮನು ಮೊದಲು ಬ್ರಹ್ಮನಿಂದ ರಾಜರ್ಷಿಯೆನ್ನಿಸಿದನು. ನಿಮ್ಮ ವಂಶಿಕನಾದ ತ್ರಿಶಂಕುವು ಸಶರೀರನಾಗಿ ಸ್ವರ್ಗವನ್ನೇರುವಂತೆ ಮಾಡಬೇಕೆಂದು ಪ್ರಾರ್ಥಿಸಲು ಗುರುಶಾಪದಿಂದ ಮಾಹನನಾಗಿ ಔತನನ್ನು ಸಂತೈಸಿ, ಪ್ರತಿಸ್ವರ್ಗವನ್ನು ನಿರ್ಮಿಸಿ, ಇಂದ್ರಾದಿ ದೇವತೆಗಳ ಅಹಂಕಾರವನ್ನು ಮುರಿದು, ಅಪ್ರತಿಮ ಪ್ರಭಾವನೆನಿಸಿದನು; ಅಂಬರೀಷ ಮಹಾರಾಯನಯಾಗಪೂರ್ತಿಗಾಗಿ ಯಾಗಪಶುವಾಗಬೇಕಾಗಿದ್ದ ಶುನಶ್ಶೇಫನನ್ನು ರಕ್ಷಿಸಿ ಇಂದ್ರನೇ ಸಕಲದೇವತೆಗಳೊಡನೆ ಬಂದು ಶುನಶ್ಶೇಫ

ನಿಗೆ ದೀರ್ಘಾಯುಸ್ಸನ್ನೂ, ಅಂಬರೀಷನಯಾಗಕ್ಕೆ ಮಹತ್ಫಲವನ್ನೂ ಕೊಟ್ಟು ತೆರಳುವಂತೆ ಮಾಡಿದನು

ರಾಮ :—ವಿಶ್ವಾಮಿತ್ರರ ಚರಿತವನ್ನು ಎಷ್ಟೆಷ್ಟು ಕೇಳಿದರೂ ದಣುವಾಗುವಂತಿಲ್ಲ !

ಶತಾ :—ದೃಢಸಂಕಲ್ಪನಾದ ಈ ಗಾಧೇಯನು ಅಲ್ಲಿಂದಮುಂದೆ ನಡೆದು, ನಡುವೆ ಬಂದ ವಿಘ್ನಗಳೆಲ್ಲವನ್ನೂ ದಾಟಿ, ಘೋರವಾದತಪಸ್ಸನ್ನು ಮಾಡಿ ಮಹರ್ಷಿಯಾದನು ಆದರೂ ಸಮಾಧಾನವಾಗಲಿಲ್ಲ ; ತಪಶ್ಚರ್ಯೆಯನ್ನೂ ಬಿಡಲಿಲ್ಲ. ಕಡೆಗೆ ಈತನ ತಪೋಜ್ವಾಲೆಗೆ ದೇವತೆಗಳೆಲ್ಲರೂ ಕಂಗೆಡಲು ಬ್ರಹ್ಮನು ಬಂದು ಪ್ರಸನ್ನನಾಗಿ 'ಬ್ರಹ್ಮರ್ಷಿಯಾದೆ' ಎಂದು ವರವಿತ್ತನು. ಆದರೂ ಈ ಮುನಿವರನು, ಬ್ರಹ್ಮರ್ಷಿಶ್ರೇಷ್ಠನಾದ, ವಾಕ್ಸಿದ್ಧಿಯುಳ್ಳವನಾದ-ತನ್ನ ಪ್ರತಿಸ್ಪರ್ಧಿಯಾದ ವಸಿಷ್ಠನ ಬಾಯಿಂದಲೇ ಬ್ರಹ್ಮರ್ಷಿಯೆನ್ನಿಸಬೇಕೆಂದು ಹಟದಿಂದಿರಲು ದೇವತೆಗಳೂ, ಋಷಿಗಳೂ ಬಂದು-ಪೂಜ್ಯನಾದ ವಸಿಷ್ಠನನ್ನು ಪ್ರಸನ್ನನಾಗಿಮಾಡಿ ಕರೆದುಕೊಂಡು ಬಂದು, ಇವರಿಬ್ಬರಿಗೂ ಸಖ್ಯವನ್ನುಂಟುಮಾಡಿದರು ! ವಸಿಷ್ಠನಿಂದ ಬ್ರಹ್ಮರ್ಷಿಯೆನ್ನಿಸಿಕೊಂಡ ಬಳಿಕ ಯಾಜನಾಧ್ಯಾಪನಾದಿ ಕರ್ಮಗಳಲ್ಲಿ ಅಧಿಕಾರಿಯಾಗಿ, ವಸಿಷ್ಠನನ್ನು ವಿಶೇಷವಾಗಿ ಪೂಜಿಸಿದನು. ಇಂತಹ ಅಮೋಘವಾದ ತಪೋಬಲವುಳ್ಳ ಈ ವಿಶ್ವಾಮಿತ್ರನು, ನಿನಗೆ ಗುರುವಾಗಿರುವುದು ನಿನಗೂ-ನಿನ್ನಮೂಲಕವಾಗಿ ಸಕಲ ಸಜ್ಜನರಿಗೂ ಶ್ರೇಯೋಭಿವೃದ್ಧಿಗಳಿಗೆ ಕಾರಣವು.

ಲಕ್ಷ್ಮಣ :—ತಪೋಧನರಾದ ನಮ್ಮ ಧನುರ್ವಿದ್ಯಾಗುರು-ವಿಶ್ವಾಮಿತ್ರರು, ಪೂಜ್ಯರಾದ ವಸಿಷ್ಠರಲ್ಲಿ ಮಾಡಿದ 'ಅಪಚಾರಕ್ಕೆ ಪ್ರಾಯಶ್ಚಿತ್ತ' ವೆನ್ನುವಂತೆ ರಾಜ್ಯಕೋಶ-ಭಂಡಾರಾದಿ ಸಕಲವಿಧ ಸಂಪತ್ತನ್ನೂ ತೊರೆದು, ದೇಹವನ್ನು ದಂಡಿಸಿ, ಅವರ ಅನುಗ್ರಹವನ್ನೇ ಗುರಿಯಾಗಿರಿಸಿ 'ತಪವಾಚರಿಸಿದುದು' ಮನೋನಿಗ್ರಹ-ಇಂದ್ರಿಯನಿಗ್ರಹಗಳನ್ನು

ಮಾಡುವದು ದುಷ್ಕರವಾಗಿರುವಲ್ಲಿ, ಜಿತೇಂದ್ರಿಯನಾದುದಲ್ಲದೆ ಬ್ರಾಹ್ಮ ಣ್ಯಾವು ಸಿದ್ಧಿಸದೆಂದು ಜಗತ್ತಿಗೇ ಬೋಧಿಸುವುದಕ್ಕಾಗಿ ಇಷ್ಟು ತಪಃಕ್ಲೇಶ ಗಳನ್ನು ಸಹಿಸಿದರು.

ಜನಕ :—(ಕೈಜೋಡಿಸಿ ವಿನಯದಿಂದ) ಋಷಿವರ್ಯರೇ ! ಶತಾನಂದನಿಂದ ವಿವರಿಸಲ್ಪಟ್ಟ ತಮ್ಮ ಪ್ರಭಾವವನ್ನು ಆಮೂಲಾಗ್ರವಾಗಿ ಕೇಳಿ ನಾವೆಲ್ಲರೂ ಧನ್ಯರಾದೆವು ; ಆನಂದಿತರಾದೆವು. ಕಾಕುತ್ಸ್ಥನಾದ ರಾಮನೊಡನೆ ತಾವು ಬಂದುದರಿಂದ ಈ ಯಾಗವೂ ಪರಿಪೂರ್ಣವೆನ್ನಿಸಿತು. ನನ್ನ ಭಾಗ್ಯೋದಯದಿಂದ ತಮ್ಮ ದಿವ್ಯ ಸಂದರ್ಶನಲಾಭವಾದುದು ! ಈ ಯಾಗವು ಪೂರೈಸುತ್ತ ಬಂದಿರುವುದರಿಂದ ಯಜ್ಞಪೂರ್ತಿಯಾಗುವವರೆಗೂ ತಾವು, ಈ ಸುಕುಮಾರರೊಡನೆ ಇಲ್ಲಿಯೇ ಇರಬೇಕೆಂದು ಪ್ರಾರ್ಥಿಸುವೆನು.

ವಿಶ್ವಾ :—ರಾಜರ್ಷಿಯಾದ ಜನಕರಾಯನೇ ! ನಾವು ಬಂದಿರುವ ಉದ್ದೇಶವೂ ಅದೇ ಆಗಿರುವುದರಿಂದ ನೀನೇನೂ ವಿಶೇಷವಾಗಿ ಪ್ರಾರ್ಥಿಸಬೇಕಾಗಿಲ್ಲವೆಂದು ತಿಳಿ ! ಪಕೃತದಲ್ಲಿ ಸಾಯಂಕಾಲವಾಗುತ್ತ ಬರುತ್ತಿರುವುದರಿಂದ ಈಗ ನಮ್ಮನ್ನು ಬೀಳ್ಕೊಡು.

ಜನಕ :—ಪೂಜ್ಯರೇ ! ತಮ್ಮ ಇಚ್ಛೆಯಂತೆಯೇ ಆಗಲಿ ! ತಾವು ಈ ರಾತ್ರಿ ವಿಶ್ರಮಿಸಿಕೊಂಡು ಮಾರ್ಗಾಯಾಸವನ್ನು ಪರಿಹರಿಸಿಕೊಂಡಿದ್ದರೆ, ನಾಳಿನ ಪ್ರಾತಃಕಾಲದಲ್ಲಿ ರಘುಪುಂಗವರೊಡಗೂಡಿದ ತಮ್ಮ ಸಂದರ್ಶನಾನಂದವನ್ನು ಪಡೆಯುವೆನು. (ರಾಮ ಲಕ್ಷ್ಮಣರ ಕೈಹಿಡಿದು) [ಅ ೯.] ಸುಕುಮಾರಶರೀರರೇ! ಇಂದ್ರೋಪೇಂದ್ರರಂತೆಯೂ ಸಂಕರ್ಷಣಾನಿರುದ್ಧರಂತೆಯೂ ಪ್ರಕಾಶಿಸುವ ನೀವೀರ್ವರೂ ಈ ಪೂಜ್ಯರೊಡನೆ ನಾಳೆ-ಅರಮನೆಗೆಬಂದು ನನ್ನನ್ನು ಆನಂದಪಡಿಸಬೇಕು.

ರಾಮ }
ಲಕ್ಷ್ಮಣ } :—ಆರ್ಯನ ಅಪ್ಪಣೆಯಂತೆಯೇ ಆಗಲಿ.

ವಿಶ್ವಾ :—ಇನ್ನು ನೀವು ಸಾಯಂಸಂಧ್ಯೆಯನ್ನಾಚರಿಸಲು ಏಳಿರಿ. ನಾವೂ ತೆರಳುವೆವು. (ಸುಕುಮಾರರೆ ! ಹೊರಡಿರಿ)

(ಎಲ್ಲರೂ ಹೊರಡುವರು.)

ಜನಕರಾಯನ ಅರಮನೆಯ ಓಲಗಶಾಲೆಯ ದ್ವಾರ

(ಜಾನಕೀ-ಊರ್ಮಿಳಾ-ಸುಲೋಚನೆಯರು ಪ್ರವೇಶಿಸುವರು)

ಊರ್ಮಿಳಾ :—ಅಕ್ಕಾ ! ಸೀತಾ ! ದಶರಥ ಪುತ್ರರಾದ ರಘುವೀರರೀರ್ವರನ್ನೂ ನಮ್ಮ ಜನಕನು ಈಗಲೇ ಇಲ್ಲಿಗೆ ಕರೆಯಿಸುವನಂತೆ !

ಸುಲೋಚನೆ:—ಅಹುದು, ಅವರನ್ನು ಕರೆತರಲು ಪುರೋಹಿತರೇ ಹೋಗಿರುವುದನ್ನು ನಾನು ಇದಿರಾಗಿ ನಿಂತು ನೋಡಿಯೇ ಬಂದೆನು.

ಜಾನಕೀ :—ಆದರೆ, ನಾವೆಲ್ಲರೂ ನೋಡಬಹುದು. ಪ್ರಿಯ ಸಖಿ ! ಸುಲೋಚನೆ, ನೀನವರನ್ನು ನೋಡಿ ಬಂದಿರುವೆಯೇನು ? ಹೇಗಿರುವರು ?

ಸುಲೋ :—ಪ್ರಿಯ ಸಖಿ ! ಸೀತಾ, ಆ ಲೋಕಮೋಹನಮೂರ್ತಿಗಳನ್ನು ನೋಡಿದಷ್ಟೂ ಮತ್ತೆ ಮತ್ತೆ ನೋಡಬೇಕೆಂಬ ಇಚ್ಛೆಯುಂಟಾಗುತ್ತಲೇ ಇರುವುದು. ಸಾಕ್ಷಾತ್ ವಿಷ್ಣುವಿನಂತೆ ಪ್ರಕಾಶಿಸುವ ಆ ರಾಮಚಂದ್ರನನ್ನು ವರ್ಣಿಸಲು ನನಗಳವೇ ? [ಪ.೧೧] ಆ ವಿಶಾಲವಾದ ಕಣ್ಣುಗಳು, ಆ ವಿಶಾಲಫಾಲಸ್ಥಲ, ಎಸಳಾಗಿಯೂ, ಬಾಗಿಯೂ ಇರುವ ಮೂಗು, ಉನ್ನತಗ್ರೀವ, ಆನೆಯ ಸೊಂಡಿಲುಗಳಂತೆ ತೋರುವ ಆಜಾನುಬಾಹುಗಳು, ಶಂಖಚಕ್ರಾಂಕಿತವಾಗಿ ಒಪ್ಪುವ ಕರಕಮಲಗಳು ! ಆ ವಿಶಾಲವಾದ ವಕ್ಷಸ್ಥಲ, ನೀಲಮೇಘದಂತೆ ಹೊಳೆವ ಮೈಬಣ್ಣ ಇತ್ಯಾದಿಯಾದ ಆತನ ಸೌಂದರ್ಯವನ್ನು ಬಣ್ಣಿಸಲು ನನ್ನಿಂದಾಗುವುದೇ ? ಸಖಿ, ಊರ್ಮಿಳಾ! ಆ ಲಕ್ಷ್ಮಣನ ಸೌಂದರ್ಯ ಸೌಕುಮಾರ್ಯವನ್ನು ಬಣ್ಣಿಸುವುದೆಂತೂ ನನಗಳವಲ್ಲ! ಆ ರಾಮಲಕ್ಷ್ಮಣರ ಆ, ಶಾಂತ-ಗಂಭೀರ-

ಭಾವನ್ನೂ,-ಆ ಮಂಜುಳ-ಕಮನೀಯ ಕಂಠಸ್ವರವೂ ಯೋಗಿಗಳನ್ನು ಕೂಡ ಮೋಹಿಸದಿರದು !

ಕಂಚುಕಿ :—(ಪ್ರವೇಶಿಸಿ) ಸುಕುಮಾರಿಯರೇ ! ಮಹಾರಾಜನು ನಿಮ್ಮನ್ನು ಈಗಲೇ ಕರತರಹೇಳಿ ಕಳುಹಿರುವನು. ಸುಕುಮಾರರೂ, ಮಹಾನುಭಾವರೂ, ಇಕ್ಷ್ವಾಕುಕುಲ ಲಲಾಮರೂ ಆದ ರಾಮಲಕ್ಷ್ಮಣಕೂಡಗೂಡಿದ ವಿಶ್ವಾಮಿತ್ರರನ್ನು ಸಮಸ್ಕರಿಸಬೇಕಂತೆ ಬನ್ನಿರಿ.

ಸೀತಾ :—(ಸಡಗರದಿಂದ) ಇದೋ-ನಾವೀಗಲೇ ಬರುವೆವು. (ಊರ್ಮಿಳಾ-ಸುಲೋಚನೆಯರ ಕೈಹಿಡಿದು) ತಂಗಿ, ಪ್ರಿಯಸಖಿ ನಡೆಯಿರಿ-(ಕಂಚುಕಿಯೊಡನೆ ಮೂವರೂ ಹೊರಡುವರು)

(ಓಲಗಶಾಲೆಯಲ್ಲಿ ಸಪರಿವಾರನಾದ ಜನಕನು ವಿಶ್ವಾಮಿತ್ರನನ್ನು ನಿರೀಕ್ಷಿಸುತ್ತ ಕುಳಿತಿರುವನು. ಜಾನಕೀ, ಊರ್ಮಿಳಾ-ಸುಲೋಚನೆಯರೂ ಒಂದು ಕಡೆಯಲ್ಲಿ ಕುಳಿತಿರುವರು ವಿಶ್ವಾಮಿತ್ರನು ರಾಮಲಕ್ಷ್ಮಣರೊಡನೆ ಶತಾನಂದನನ್ನು ಮುಂದುಮಾಡಿಕೊಂಡು ಪ್ರವೇಶಿಸುವನು.)

ಜನಕ. —(ಎಲ್ಲರೊಡನೆ ಎದ್ದು-ಮುಂದೆ ಬಂದು ಶಿರಬಾಗಿ ನಮಸ್ಕರಿಸಿ) ತಪೋಧನರೇ ! ಕೃಪಾಪೂರ್ಣರಾದ ತಾವು ಪೀಠದಲ್ಲಿ ಕುಳಿತು-ನಾನು ಮಾಡಬೇಕಾದ ಕೆಲಸವೇನೆಂದು ನಿರೂಪಿಸಲು ಪ್ರಾರ್ಥಿಸುವೆನು !

ವಿಶ್ವಾ :—(ಕುಳಿತು) ಎಲೈ ಜನಕಮಹಾರಾಜನೇ ! ನಿನಗೆ ಶ್ರೇಯೋಭಿವೃದ್ಧಿಯಾಗಲಿ ! ನೀನೂ ಸಪರಿವಾರನಾಗಿ ಕುಳಿತುಕೊಂಡು ಕೇಳಿದರೆ ಹೇಳುವೆನು !

ಜನಕ :—(ಸಪರಿವಾರನಾಗಿ ಕುಳಿತುಕೊಳ್ಳುವನು )

ವಿಶ್ವಾ :—ಎಲೈ ಭಾಗ್ಯಶಾಲಿಯೇ! ಈ ರಾಮಲಕ್ಷ್ಮಣರು ನಿನ್ನಲ್ಲಿರುವ ಶೈವಧನುಸ್ಸನ್ನು ನೋಡಿ ಸಂತೋಷಪಡಬೇಕೆಂದು ಬಂದಿರುವರು.

ಜನಕ :—(ಸಡಗರದಿಂದ) ಪೂಜ್ಯರೇ! ಅದ್ವಿತೀಯಪುರುಷರಾದ ಇವರು ಅವಶ್ಯವಾಗಿ ನೋಡಬೇಕಾದ ಧನುಸ್ಸೇ ಅದು.

ವಿಶ್ವಾ :—ಹಾಗಾದರೆ ಆ ಧನುಸ್ಸನ್ನು ತರಿಸು!

ಜನಕ :—(ಸಚಿವನಕಡೆಗೆ ತಿರುಗಿ) ಅಮಾತ್ಯವರ್ಯ! ಚಾರರ ಮೂಲಕ ಧನುಸ್ಸಿನ ಪೆಟ್ಟಿಗೆಯನ್ನು ತರಿಸು.

ಅಮಾತ್ಯ :—ಅಪ್ಪಣೆ (ಹೋಗುವನು.)

ಜನಕ :—ಮಹಾತ್ಮರೆ! ಈ 'ಸುನಾಭ' ವೆಂಬ ಧನುಸ್ಸು ನನಗೆ ಬಂದ ವಿವರವನ್ನು ಈ ಸುಕುಮಾರರು ತಿಳಿಯಲು ಹೇಳುವೆನು. ಕೇಳಬೇಕು. [ಅ. ೧೨.]

ದಕ್ಷಾಧ್ವರವಿಧ್ವಂಸನ ಕಾಲದಲ್ಲಿ ರುದ್ರನು ದೇವತೆಗಳಮೇಲೆ ಕುಪಿತನಾಗಿರಲು ದೇವತೆಗಳೆಲ್ಲರೂ ಬಹುವಿಧದಿಂದ ಆತನನ್ನು ಸ್ತುತಿಸಿ ಪ್ರಾರ್ಥಿಸಿ-ಸಮಾಧಾನಪಡಿಸಲು, ರುದ್ರನು ಶಾಂತನಾಗಿ ಆ ಧನುಸ್ಸನ್ನು ದೇವತೆಗಳಲ್ಲಿಯೇ ಬಿಟ್ಟು ಹೊರಟುಹೋದನು.

ನಮ್ಮ ವಂಶದಲ್ಲಿ ಸುಪ್ರಖ್ಯಾತನೂ ದೇವತೆಗಳಿಗೆ ಅತ್ಯಂತ ಪ್ರೀತ್ಯಾಸ್ಪದನೂ ಆದ ದೇವರಾತನೆಂಬವನಿಗೆ ಆ ಧನುಸ್ಸು ದೇವತೆಗಳಿಂದ ಕೊಡಲ್ಪಟ್ಟಿತು. ಅಂತಹ ಧನುಸ್ಸನ್ನು ನಾನು ನಿತ್ಯವೂ ಪೂಜಿಸುತ್ತಿರುವೆನು.

ವಿಶ್ವಾ :—ಈ ಧನುಸ್ಸನ್ನು ನೋಡಲು ಅನೇಕರಾಜರು ಬಂದಿರಬಹುದಲ್ಲವೆ?

ಜನಕ :—ಧನುಸ್ಸಿನ ಪ್ರಾಶಸ್ತ್ಯವನ್ನು ಕೇಳಿ-ನೋಡಿ ಹೋಗಲು ಬಂದವರು ಹಾಗಿರಲಿ; ಮಹಾತ್ಮನೆ, ನಾನು ಯಜ್ಞಮಾಡಬೇಕೆಂದು ಸಂಕಲ್ಪಿಸಿ ಭೂಶೋಧನಮಾಡುತ್ತಿರಲು, ಭೂಮಿಯಲ್ಲಿ ನೇಗಿಲಿಗೆ ಸಿಕ್ಕಿ

ಕನ್ಯಾಶಿಶುವೊಂದು ನನಗೆ ಲಭಿಸಿತು. ಆ ಶಿಶುವನ್ನು ನಾನು ನನ್ನ ಔರಸಪುತ್ರಿಗೂ ಮಿಗಿಲಾಗಿ ಭಾವಿಸಿ, ಅವಳಿಗೆ ಸೀತೆಯೆಂಬ ಹೆಸರಿಟ್ಟು ಅತ್ಯಂತ ಮಮತೆಯಿಂದ ಪಾಲಿಸಿದೆನು ; ಅಯೋನಿಜೆಯೂ, ಸಾಕ್ಷಾತ್ ಲಕ್ಷ್ಮೀದೇವಿಯಂತೆ ಸರ್ವಲಕ್ಷಣಸಂಪನ್ನೆಯೂ, ಸಕಲ ಕಲ್ಯಾಣಗುಣ ಪೂರ್ಣೆಯೂ ಆದ ಆ ಕನ್ಯೆಗೆ ತಕ್ಕ ವರನನ್ನು ಗೊತ್ತುಮಾಡಲು,- ಈ 'ಶೈವಧನುಸ್ಸಿಗೆ ಹೆದೆಯೇರಿಸಿದ, ವೀರನೇ ಸೀತೆಗೆ ವರನಾಗತಕ್ಕವ' ನೆಂದು ಪಣವನ್ನು ಕಟ್ಟಿದೆನು. ವೀರ್ಯಶುಲ್ಕೆಯಾದ ಸೀತೆಯನ್ನು ಪಡೆಯಬೇ ಕೆಂಬ ಆಶೆಯಿಂದ ಎಷ್ಟೋ ರಾಜರೂ-ರಾಜಪುತ್ರರೂ ಬಂದಿದ್ದು,-ಭಗ್ನ ಮನೋರಥರಾಗಿ ಹಿಂತಿರುಗಿಹೋದರು.

ವಿಶ್ವಾ :— ಯಾರಿಂದಲೂ ಧನುಸ್ಸನ್ನು ಬಾಗಿಸಲಾಗಲಿಲ್ಲವೆ ?

ಜನಕ: — ಧನುಸ್ಸನ್ನು ಬಾಗಿಸುವ ಮಾತಿರಲಿ, ಎಷ್ಟೋಮಂದಿಗೆ ಅದನ್ನು ಹಿಡಿದೆತ್ತಲಿಕ್ಕೂ ಆಗಲಿಲ್ಲ. ಹೀಗಾಗಲು ಬಹುಜನರು ನನ್ನಲ್ಲಿ ದ್ವೇಷಪಟ್ಟು ಈ ಮೂಲಕ ತಮ್ಮನ್ನು ಅಪಮಾನಮಾಡುತ್ತಿರುವನೆಂಬ ತಪ್ಪುತಿಳುವಳಿಕೆಯಿಂದ ನನ್ನನ್ನು ನಿಗ್ರಹಿಸಲು ಬಂದರು. ಕಡೆಗೆ ದೇವತೆ ಗಳ ಅನುಗ್ರಹದಿಂದಲೂ, ದೈವಸಹಾಯದಿಂದಲೂ ಅವರೆಲ್ಲರನ್ನೂ ಸೋಲಿಸಿದೆನು

(ಮಂತ್ರಿಯು ಮುಂದೆಬಂದು ಕೈಜೋಡಿಸಿ ನಿಲ್ಲುವನು.)

ಜನಕ :— ಧನುಸ್ಸು ಬಂದಿರುವುದೇನು ?

ಮಂತ್ರಿ :— ಅಹುದು ; ಗಂಧಪುಷ್ಪಾದಿಗಳಿಂದ ಪೂಜಿಸಲ್ಪಟ್ಟಿ ರುವ ಆ ಮಹಾ ಧನುಸ್ಸನ್ನು ಐದುಸಾವಿರಮಂದಿ ವೀರಭಟರು ಅಷ್ಟ ಚಕ್ರಗಳುಳ್ಳ ಬಂಡಿಯಲ್ಲಿಟ್ಟು ತಂದು ಅದೋ ಅಲ್ಲಿರಿಸಿರುವರು, ಬಂದು ನೋಡಬಹುದು.

ಜನಕ :—(ರಾಮಲಕ್ಷ್ಮಣರನ್ನು ನೋಡಿ) [ಅ. ೧೩.] ಸುಕು ಮಾರರೇ ! ಅದೋ ಅಲ್ಲಿರುವ ಧನುಸ್ಸನ್ನು ನೋಡಿ, ಸಾಧ್ಯವಾದರೆ

ಹಿಡಿದೆತ್ತಿ ಬಾಗಿಸಿ, ಹೆದೆಯೇರಿಸಿ; ವೀರ್ಯಶುಲ್ಕಳಾದ ಸೀತೆಯ ಪಾಣಿಗ್ರಹಣಮಾಡಬಹುದು.

ರಾಮ :—(ವಿಶ್ವಾಮಿತ್ರನಕಡೆಗೆ ನೋಡಿ ಕೈಜೋಡಿಸಿ) ಪೂಜ್ಯನೇ! ಅಪ್ಪಣೆಯೇ?

ವಿಶ್ವಾ :—ವತ್ಸ! ನಿನಗೆ ವಿಜಯವಾಗಲಿ! ಧನುಸ್ಸಿನಬಳಿಗೆ ನಡೆ, ಸುಮುಹೂರ್ತವಾಗಿರುವುದು.

ರಾಮ :—(ಲಕ್ಷ್ಮಣನ ಕೈಹಿಡಿದು) ಅನುಜಾತ! ಬರುವೆಯಾ?

ಲಕ್ಷ್ಮಣ :—ನಾನು ಯಾವಾಗಲೂ ನಿನ್ನ ಬೆನ್ನಹಿಂದೆಯೇ ಇರುವೆನು! (ಮುಂದಕ್ಕಡಿಯಿಡುವನು)

(ರಾಮಲಕ್ಷ್ಮಣರು ಮಂದಗಮನದಿಂದ ಧನುಸ್ಸಿನಬಳಿಗೆ ಬರುವರು.)

ಸುಲೋಚನೆ :—(ಜಾನಕೀ, ಊರ್ಮಿಳೆಯರ ಕೈಹಿಡಿದು ರಾಮನ ಕಡೆಗೆ ಕೈತೋರಿಸಿ)-ಪ್ರಿಯಸಖಿಯರೇ! ಅಲ್ಲಿನೋಡಿರಿ. ಶ್ರೀ ರಾಮಲಕ್ಷ್ಮಣರೆಂಬ-ದಶರಥಪುತ್ರರು ಧನುಸ್ಸನ್ನು ನೋಡಬಂದಿರುವರು. ಪ್ರಿಯಸಖಿ! ಜಯಮಾಲಿಕೆಯನ್ನು ಎತ್ತಿ ಹಿಡಿ; ರಾಮಚಂದ್ರನಿಗೆ ಮಾಲೆಹಾಕಲು ಸಿದ್ಧಳಾಗು. ಸಖಿ, ಊರ್ಮಿಳಾ ನೋಡು ನೋಡು.

(ಮೂವರೂ ನೋಡುವರು.)

ಜನಕಪುತ್ರನಾದ<br>ಲಕ್ಷ್ಮೀನಿಧಿ } :—ವೀರಬಾಲಕರೇ! ಇದೇ ಧನುಸ್ಸು! ಬಂದುನೋಡಿ-ಸಾಹಸಮಾಡಿರಿ. (ಪೆಟ್ಟಿಗೆಯ ಬಾಗಿಲನ್ನು ತೆಗೆಯುವನು)

ರಾಮ :—(ತಮ್ಮನೊಡನೆ ಪೆಟ್ಟಿಗೆಯ ಬಳಿಗೆ ಬಂದು-ತಮ್ಮನನ್ನು ಕುರಿತು) ಅನುಜಾತ, ಲಕ್ಷ್ಮಣಾ! ಆಶ್ಚರ್ಯಕರವೂ, ಅದ್ಭುತವೂ ಆದೀ-ಧನುಸ್ಸನ್ನು ನೋಡು-ನೋಡು! ಅನೇಕಮಂದಿ ರಾಜ-ರಾಜಕ್ಷತ್ರರ ಆಶಾಭಂಗವನ್ನು ಮಾಡಿ, ಶೌರ್ಯಹೀನರೆನ್ನಿಸಿದ ಧನುಸ್ಸು, ಇದೇ ಅಲ್ಲವೆ? ನೋಟು. [ಅ. ೧೪.]

ಲಕ್ಷ್ಮಣ :—ಆರ್ಯನೆ ! ನಿಜ, ಆಶ್ಚರ್ಯಕರವಾದ-ಕುತೂಹಲ ಜನಕವಾದ ಧನುಸ್ಸಿದು ! ಆದುದರಿಂದಲೇ ಇದನ್ನೆತ್ತಿ ಬಾಗಿಸಿ ಹೆದೆಯೇರಿಸಿ, ಜಗತ್ತೇ ಆಶ್ಚರ್ಯ ಹೊಂದುವಂತೆ, ಸೀತಾದೇವಿಯಿಂದ ಜಯಮಾಲಿಕೆಯನ್ನು ಪಡೆವುದಕ್ಕೆ ಇದೇ ಸಮಯವು !

ರಾಮ :— (ವಿಶ್ವಾಮಿತ್ರನೊಡನೆ ಮಾತನಾಡುತ್ತಿದ್ದ ಜನಕನನ್ನು ಉದ್ದೇಶಿಸಿ ಗಂಭೀರವಾಗಿ) ಪೂಜ್ಯನಾದ ವಿದೇಹರಾಜನೇ ! ಈ ಮಹಾಧನುಸ್ಸನ್ನು ನಾನು ಮುಟ್ಟಬಹುದೇ ?

ಜನಕ :—ಅಗತ್ಯವಾಗಿ ತೆಗೆದುನೋಡು.

ಲಕ್ಷ್ಮೀನಿಧಿ :— ವೀರವರನೇ ! ಧನುಸ್ಸನ್ನು ತೆಗೆದುನೋಡುವುದು ಮಾತ್ರವೇ ಅಲ್ಲ; ಸಾಹಸದಿಂದ ಬಾಗಿಸಿ ನಾಣೇರಿಸಿ, ಪಣಾಕ್ಷಿಯಾದೆನ್ನ ತಂಗಿಯ ಪಾಣಿಗ್ರಹಣಮಾಡೆಂದು, ನಾನೆನ್ನುವೆನು. [ಅ. ೧೫.]

ರಾಮ :— (ಲೀಲೆಯಿಂದ ಧನುಸ್ಸನ್ನು ಮೇಲಕ್ಕೆತ್ತಿ ನಾಣನ್ನು ಬಿಗಿದು ಸೆಳೆಯುವನು. ಮಹಚ್ಛಬ್ದದೊಡನೆ ಧನುಸ್ಸು ಮಧ್ಯಕ್ಕೆ ಸರಿಯಾಗಿ ಮುರಿದು ಹೋಗುವುದು. ಎಲ್ಲರೂ ಬೆದರಿ ಕಣ್ಣು ಮುಚ್ಚುವರು)

ಲಕ್ಷ್ಮೀನಿಧಿ:-(ರಾಮಲಕ್ಷ್ಮಣರನ್ನು ಆಲಿಂಗಿಸಿ-ಆನಂದಬಾಷ್ಪವನ್ನು ಸುರಿಸುತ್ತ) ವೀರಾಗ್ರಣಿಗಳೇ ! ಶೌರ್ಯನಿಧಿಗಳೇ ! ಧೈರ್ಯಸ್ಥೈರ್ಯಗಾಂಭೀರ್ಯಾದಿ ಗುಣಾಲಂಕೃತರಾದ ಶ್ರೀರಾಮಲಕ್ಷ್ಮಣರೇ ! ಈಗಲೀಗ ನಮ್ಮ ಜನಕನ ಪಣವು ಗೆದ್ದಿತು. ವೀರ್ಯಶುಲ್ಕೆಯಾದ ನನ್ನ ತಂಗಿ-ಸೀತೆಗೆ ಅನುರೂಪವರನು ಲಭಿಸಿದನೆಂಬ ಆನಂದವಾಯ್ತು ! ಬನ್ನಿರಿ, ಗುರುಜನರಬಳಿಗೆ ಹೋಗುವ !

(ರಾಮಲಕ್ಷ್ಮಣರು ಲಕ್ಷ್ಮೀನಿಧಿಯೊಡನೆ ಜನಕ-ವಿಶ್ವಾಮಿತ್ರರಿದ್ದಲ್ಲಿಗೆ ಬರುವರು.)

ಜನಕ :—(ಆಶ್ಚರ್ಯಾತಿಶಯದಿಂದ ವಿಶ್ವಾಮಿತ್ರನನ್ನು ಕುರಿತು) ಮಹರ್ಷಿಯೇ ! ಲೋಕೋತ್ತರರಾದೀ ಸುಕುಮಾರರಿಂದ ನಾನಿಂದು

ಇಷ್ಟಾರ್ಥ ಸಿದ್ಧಿ ಹೊಂದಿದೆನು. ದಶರಥ ಪುತ್ರನಾದ ಈ ಶ್ರೀರಾಮನು ದೇವಾಂಶಪುರುಷನೇ ಹೊರತು ಪ್ರಾಕೃತನಲ್ಲ ! ಅಪ್ರಾಕೃತ ಪುರುಷ ನಾದುದರಿಂದಲೇ ಈ ಬಾಲ್ಯದಲ್ಲಿಯೇ ಇಷ್ಟೊಂದು ಅತಿಮಾನುಷವ್ಯಾ ಪಾರಗಳು ಈತನಿಂದ ನಡೆದಿರುವುವು. ವೀರ್ಯಶುಲ್ಕಳಾದ ಸೀತೆಯು ಮಹಾನುಭಾವನಾದ ರಾಮನನ್ನು ಭರ್ತನಾಗಿ ಪಡೆಯಲು ಎಷ್ಟು ಸುಕೃತವಮಾಡಿದ್ದಳೋ ! ಅಲ್ಲ-ಅಲ್ಲ-ಅಯೋನಿಜೆಯೂ ಸಮಸ್ತಕಲ್ಯಾಣ ಗುಣಾಲಂಕೃತೆಯೂ ಆದ ಸೀತಾದೇವಿಯನ್ನು ಕೈಹಿಡಿಯಲಿಕ್ಕೆ ವೀರಾ ಗ್ರಣಿಯಾದೀ ಶ್ರೀರಾಮನೇ ಅರ್ಹನು !

ಶತಾ :—ವಿಶ್ವಾಮಿತ್ರರೇ ! ಪುರುಷಸಿಂಹನಾದ ಶ್ರೀರಾಮನೂ, ಪರಮಶಾಂತಮೂರ್ತಿಯಾದ ಲಕ್ಷ್ಮಣನೂ ಇಲ್ಲಿಗೆ ಬಂದು ನಮ್ಮೆಲ್ಲರನ್ನೂ ಆನಂದಪಡಿಸಿದುದಕ್ಕೆ ಮಹಾನುಭಾವರಾದ ನಿಮ್ಮ ಕೃಪೆಯೇ ಕಾರಣ ವೆಂದು ಭಾವಿಸಿ, ನಾವೆಲ್ಲರೂ ನಿಮ್ಮನ್ನು ಅಭಿನಂದಿಸುವೆವು.

ಜನಕ :—ಪೂಜ್ಯರೇ ! ತಮ್ಮ ಅಭಿಪ್ರಾಯವನ್ನು ತಿಳಿದು, ಈಗಲೇ ದಶರಥರಾಯನನ್ನು ಕರೆತರಲು ನನ್ನ ಮಂತ್ರಿಗಳನ್ನು ಕಳುಹಿಸ ಬೇಕೆಂದಿರುವೆನು.

ವಿಶ್ವಾ :—ಅಹುದು ; ಸಾಧುವಾದ ಆಲೋಚನೆ. ಈಗಲೇ ಅಯೋಧ್ಯೆಗೂ-ನಿನ್ನ ತಮ್ಮನ ಬಳಿಗೂ ಜನರನ್ನು ಕಳುಹಿಸಬೇಕಾದುದು ಆವಶ್ಯಕವು !

ಲಕ್ಷ್ಮೀ:—(ರಾಮಲಕ್ಷ್ಮಣರನ್ನು ಕರತಂದು ಬಿಟ್ಟು-ಜಾನಕೀ ಊರ್ಮಿಳೆಯರಿದ್ದಲ್ಲಿಗೆ ನಡೆವನು.)

ರಾಮ:—(ಲಕ್ಷ್ಮಣನೊಡನೆ ಬಂದು ವಿಶ್ವಾಮಿತ್ರ-ಶತಾನಂದ- ಜನಕರಾಯರ ಮುಂದೆ ತಲೆಬಾಗಿ-ವಿನೀತನಾಗಿ ನಿಲ್ಲುವನು.)

ಜನಕ :—(ರಾಮನ ಕೈಹಿಡಿದು) [ಅ. ೧೬.] ರಾಮನೇ ! ಯೋಗೀಜನಹೃದಯಾರಾಮನೇ ! ಸುಗುಣಾರಾಮನೇ ! ದಶರಥ ಸುಕುಮಾರನಾದ ಶ್ರೀರಾಮನೇ ! ಲೋಕಮೋಹನವಿಗ್ರಹನಾದ ನಿನ್ನನ್ನು ಜಾಮಾತನಾಗಿ ಪಡೆದು ನಾನೇ ಧನ್ಯನಾದೆನು. ನನ್ನ ವಂಶವೇ ಪವಿತ್ರತಮವೆನ್ನಿಸಿತು ; (ಲಕ್ಷ್ಮಣನ ಕೈಹಿಡಿದು ಆನಂದಾತಿಶಯದಿಂದ) ಸರ್ವಲಕ್ಷಣಸಂಪನ್ನನಾದ ಲಕ್ಷ್ಮಣಕುಮಾರನೇ ! ಶಾಂತ-ಗಂಭೀರ, ವೀರ-ಕರುಣಾರಸಗಳೇ ಮೂರ್ತೀಭವಿಸಿದಂತೆ ಪ್ರಕಾಶಿಸುವ ನಿನ್ನನ್ನು ನೋಡಿ, ನಾನು ಸುಪ್ರೀತನಾಗಿ-ನಿನ್ನನ್ನೂ ನನ್ನ ಜಾಮಾತನಾಗಿ ಮಾಡಿಕೊಳ್ಳಲು ಸಂಕಲ್ಪಿಸಿರುವೆನು !

ರಾಮ<br>ಲಕ್ಷ್ಮಣ } (ಮೃದುಮಧುರವಾಗಿ):—ಗುರುಜನರ ಶಾಸನವು ಸರ್ವದಾ ನಮಗೆ ಮಾನ್ಯವಾಗಿರುವುದು !

ಲಕ್ಷ್ಮೀ: —(ಜಾನಕೀ, ಊರ್ಮಿಳೆಯರನ್ನು ಕರೆದುಕೊಂಡು ಬಂದು) ಪ್ರಿಯಜನಕನೇ ! ತಂಗಿಯರು, ಪೂಜ್ಯರಾದ ವಿಶ್ವಾಮಿತ್ರರನ್ನು ನಮಸ್ಕರಿಸಬೇಕೆಂದು ಬಂದಿರುವರು ; ಮತ್ತು ವೀರ್ಯಶುಲ್ಕಳಾದ ನಮ್ಮ ಜಾನಕಿ, ವೀರಾಗ್ರಣಿಯಾಗಿ ಪಂಥವನ್ನು ಗೆದ್ದ ರಾಮನಿಗೆ ಜಯಮಾಲೆಯನ್ನರ್ಪಿಸಲು ಕುತೂಹಲದಿಂದ ಗುರುಜನರ ಅಪ್ಪಣೆಯನ್ನು ಕೇಳುವಳು?

ಜನಕ :—(ಸಂತೋಷದಿಂದ) ಸುಕುಮಾರಿಯರೇ! ಇತ್ತ ಬನ್ನಿರಿ. ಮಹಾಮಹಿಮರೂ-ತಪೋಧನರೂ ಆದ ಈ ವಿಶ್ವಾಮಿತ್ರರಿಗೆ ನಮಸ್ಕರಿಸಿರಿ ! ಗುರುಜನರನ್ನು ವಂದಿಸುವಾಗ ಸಂಕುಚಿತಮನಸ್ಕರಾಗದೆ ಪ್ರಸನ್ನಚಿತ್ತರಾಗಿಯೂ ವಿನೀತೆಯರಾಗಿಯೂ ನಮಸ್ಕರಿಸಬೇಕು.

ಜಾನಕೀ<br>ಊರ್ಮಿಳಾ } 'ಪಿತನ ಅನುಮತಿಯಂತೆ' (ಮುಂದೆ ಬಂದು ಶಿರಬಾಗಿ) ಪರಮಪೂಜ್ಯರಿಗೆ ನಮಸ್ಕರಿಸುವೆವು !

ವಿಶ್ವಾ :—'ಸೌಭಾಗ್ಯಸಿದ್ಧಿರಸ್ತು!' ||ಸ್ವಗತ|| ಆಹಾ! ಲೋಕ ನಾಯಕನಾದ ರಾಘವನಿಗೆ ಅನಪಾಯಿನಿಯಾದ, ಲೋಕನಾಯಕಿ ಯಾದ-ಈ ಜಾನಕೀದೇವಿಯು, ಪತಿಗೆ ತಕ್ಕ ಪತ್ನಿಯೆನಿಸಿ, ನರಲೀಲೆ ಯನ್ನು ಹೇಗೆ ಪ್ರಕಟಿಸುವಳು! ಎಷ್ಟು ವಿನಯ, ಭಯಭಕ್ತಿ, ಗೌರವ ಗಳನ್ನು ತೋರುತ್ತಿರುವಳು! ದಯಾಮಯಿಯಾದ ಜಗನ್ಮಾತೆಗೆ, ಪಿತನೆನ್ನಿ ಸಿದ ಈ ಜನಕನ ಭಾಗ್ಯವೇ ಭಾಗ್ಯವು!

ಊರ್ಮಿಳೆ :—(ಮೆಲ್ಲನೆ ಜಾನಕಿಯ ಕಿವಿಯಲ್ಲಿ) ಅಕ್ಕಾ! ವಿಜಯಮಾಲೆಯನ್ನು ಒಪ್ಪಿಸುವುದಿಲ್ಲವೆ?

ಜಾನಕಿ :—ಉಂ (ಸಖಿಯ ಕಡೆಗೆ ನೋಡುವಳು)

ಸಖಿ :—(ಮುಂದೆಬಂದು-ಸ್ವರ್ಣಸಂಪುಟದಲ್ಲಿದ್ದ ಮಾಲೆಯನ್ನು ತೆಗೆದು ಮುಂದೆ ನೀಡುವಳು)

ಲಕ್ಷ್ಮೀ :—ಪ್ರಿಯ ಸಹೋದರಿ! ವೀರನನ್ನು ವಿಜಯಮಾಲೆ ಯಿಂದ ಪುರಸ್ಕರಿಸು!

ಜಾನಕಿ :—(ಜನಕನ ಕಡೆ ನೋಡುವಳು)

ಜನಕ :—(ತಲೆದೂಗಿ ಸಮ್ಮತಿಯನ್ನು ಸೂಚಿಸುವನು)

ಜಾನಕಿ :—(ಹರ್ಷಕಂಪನದಿಂದ ಮೆಲ್ಲನೆ ಕೈಯೆತ್ತಿ ಸಟೆಬಾಗಿ) [ಅ ೧೭.] 'ಭೂಸುರಪ್ರಿಯನೂ-ಸಾಧುಸಮ್ಮತನೂ ಸಕಲಸಜ್ಜನಪೂಜಿ ತನೂ, ಸರ್ವಮಂಗಳ ಸ್ವರೂಪನೂ, ಸುರಾರಿವಿರೋಧಿಯೂ, ಶರಣಾಗತ ಪರಿಪಾಲನೂ ಆದ ರಘುವೀರನಿಗೆ ವಿಜಯಮಾಲೆಯೊಪ್ಪಿಸುವೆನು. ಪುರು ಷೋತ್ತಮನು ಪ್ರಸನ್ನನಾಗಬೇಕು.'

(ರಾಮುನಕೊರಳಲ್ಲಿ ಧರಿಸುವಳು. ರಾಮನು ಮಾಲೆಯನ್ನು ಕೈಯಿಂದ ಹಿಡಿದುನೋಡಿ, ಗುರುಜನರಿಗೆ ಶಿರಬಾಗುವನು. ಗಗನದಲ್ಲಿ ದೇವದುಂದುಭಿವಾದ್ಯಗಳೊಡನೆ ಪುಷ್ಪವೃಷ್ಟಿಯಾಗುವುದು. ಋಷಿ ಗಳೂ-ರಾಜ-ರಾಜಪರಿವಾರಗಳೂ ಜಯಜಯಕಾರಮಾಡುವರು.)

ವಿಶ್ವಾ :—ರಾಜರ್ಷಿಶ್ರೇಷ್ಠನಾದ ಜನಕರಾಯನೇ! ಇನ್ನು ವಿವಾಹಪ್ರಯತ್ನವನ್ನು ಮಾಡಲು ನಾವಕಾಶಮಾಡಬೇಕಾಗಿಲ್ಲ.

ಜನಕ :—ಅಹುದು. ಈಗಲೇ ಕಾರ್ಯನಿರ್ವಾಹಕರನ್ನು ನೇಮಿಸುವೆನು. ಪೂಜ್ಯನಾದ ದಶರಥಮಹಾರಾಜನೂ, ನನ್ನ ಅನುಜಾತನೂ ಬರುವುದರೊಳಗೆ ನನ್ನ ಯಜ್ಞವೂ ಸಾಂಗವಾಗಿ ನೆರವೇರುವುದು.

ವಿಶ್ವಾ :—ಹಾಗಿದ್ದರೆ, ಇನ್ನು ನಾವು ಮುಂದಿನ ಶುಭಕಾರ್ಯಗಳಲ್ಲಿ ತತ್ಪರರಾಗುವ ?

ಶತಾ :—ಅಹುದು, ಜನಕರಾಯನೆ! ನಿನ್ನ ತಮ್ಮನಬಳಿಗೂ, ದಶರಥನಬಳಿಗೂ ಜನರನ್ನು ಕಳುಹಿಸಿ, ಸುಕುಮಾರಿಯರ ವಿವಾಹಕ್ಕೆ ಸನ್ನಾಹಗೊಳಿಸಲು ಇನ್ನು ಗಮನಿಸಬೇಕು.

ಜನಕ :—ಅಪ್ಪಣೆ. (ಲಕ್ಷ್ಮೀನಿಧಿಯನ್ನು ಕುರಿತು) ವತ್ಸ! ಸುಕುಮಾರಿಯರನ್ನು ಅಂತಃಪುರಕ್ಕೆ ಕರೆದೊಯ್ದು ಬಿಟ್ಟುಬಂದು, ಅತಿಥಿಗಳಾಗಿಯೂ, ಅಭ್ಯಾಗತರಾಗಿಯೂ, ಪ್ರೇಕ್ಷಕರಾಗಿಯೂ ಬಂದು-ಬರುತ್ತಿರುವ ಭೂಭುಜರನ್ನೂ, ಭೂದೇವರನ್ನೂ ಯಥೋಚಿತವಾಗಿ ಸತ್ಕರಿಸಿ, ತೃಪ್ತಿಪಡಿಸು. ವಿವಾಹಮಹೋತ್ಸವವು ನೆರವೇರುವವರೆಗೂ ಸರ್ವರೂ ಸರ್ವಕಾಲದಲ್ಲೂ ಸುಖಸಂತೋಷವಾಗಿರುವಂತೆ ಏರ್ಪಡಿಸು! (ವಿಶ್ವಾಮಿತ್ರ-ಶತಾನಂದರನ್ನು ಕುರಿತು) ಪೂಜ್ಯರೇ! ದಶರಥಮಹಾರಾಜನು ಬರುವವರೆಗೂ ಸುಕುಮಾರರಾದ ರಾಮಲಕ್ಷ್ಮಣರೊಡನೆ ಯಥೇಚ್ಛವಾಗಿ, ಸುಖದಿಂದ ವಿಶ್ರಮಿಸಿಕೊಳ್ಳುತ್ತಿರಬೇಕೆಂದು ಪ್ರಾರ್ಥಿಸುವೆನು.

ಶತಾ, ವಿಶ್ವಾ :—ತಥಾಸ್ತು!

(ಮತ್ತೆ ಗಗನದಲ್ಲಿ ದೇವದುಂದುಭಿವಾದ್ಯಗಳಾಗುವುವು)

ಎಲ್ಲರೂ ಏಳುವರು.

(ಪಂಚಮಾಂಕಂ)

|| ಶ್ರೀಃ ||

# ಷಷ್ಠಾಂಕಂ

ರಾಗ—ಹಿಂದೂಸ್ಥಾನಿ (ಏಕತಾಳ ಝಂಪಾ ರೂಪಕ)

ಜಯ, ಜಾನಕೀರಮಣ, ಜಯ ಕೌಸ್ತುಭಭರಣ, ಜಯ-ಪಾವನಚರಣ ||ಪ||

ಜಯಜಯ ಕೌಸಲ್ಯಾನಂದವರ್ಧನ-ಜಯಪಾವನಚರಣ ||ಅ||

ಜಗದುದ್ಧರಣ-ಅಪಾರಕರುಣ-ಅಗೇಶಾರ್ಚಿತಕಚರಣ |

ಖಗೇಶಗಮನ ಜಲನಿಧಿಶಯನ ಸುರಾರಿಕುಲಸಂಹರಣ ||ಜಯ||೧||

ಸೂನೃತಪಾಲ-ಜಾನಕೀಲೋಲ-ದೀನಜನಾವಾಲ ||

ದಾನವಕಾಲ-ಶ್ರೀವನಮಾಲ ಮಾನಿತಗುಣಶೀಲ ||ಜಯ||೨||

ಶೇಷಗಿರೀಶ-ಶ್ರಿತಪರಿಪೋಷ ವಾಸವಪರಿತೋಷ |

ದೋಷವಿನಾಶ ದಶಶಿರಧ್ವಂಸ-ಕವಿಜನಮಾನಸಹಂಸ ||ಜಯ||೩||

[ಜನಕರಾಯನ ಅರಮನೆಯ ವಿವಾಹಮಂಟಪದ ಹೊರಗೆ ಸಿದ್ಧಚಾರಣರ ಪ್ರವೇಶ]

ಸಿದ್ಧ :—ಸಪರಿವಾರನಾಗಿ ದಶರಥರಾಯನು ಬರುತ್ತಿರುವ ಉತ್ಸವವನ್ನು ನೋಡುವಂತಿದೆ !

ಚಾರಣ :—ಉತ್ಸವವಲ್ಲವೆ ? ೬೦ ಸಹಸ್ರವರ್ಷಗಳಮೇಲೆ ಲೋಕೋತ್ತರರೂ ದೈವೀಗುಣಸಂಪನ್ನರೂ ಆದ ಪುತ್ರರನ್ನು ಪಡೆದಿರುವನು ! ಪುತ್ರಜ್ಯೇಷ್ಠನಾದ ಶ್ರೀರಾಮನನ್ನು ಕ್ಷಣಮಾತ್ರವಾದರೂ ಅಗಲಿರಲಾರದ ಈ ರಾಜನು ಪುತ್ರರನ್ನು ವಿಶ್ವಾಮಿತ್ರನ ವಶಕ್ಕೊಪ್ಪಿಸುವಾಗ ಎಷ್ಟು ಕಷ್ಟದಿಂದ ಕಳುಹಿದನೋ ! ಈವರೆಗೆ ರಾಮಲಕ್ಷ್ಮಣರ ವಿರಹವನ್ನು ಹೇಗೆ ಸಹಿಸಿದ್ದನೋ-ಹೇಳಲಾದೀತೆ ? ಇಂತಹ ಲೋಕಾಭಿರಾಮನಾದ ಶ್ರೀರಾಮನು ಮಾಡಿರುವ ಅದ್ಭುತಕಾರ್ಯಗಳನ್ನೂ ಜಾನಕೀದೇವಿಯು ವರಮಾಲೆಯನ್ನೊಪ್ಪಿಸಿದುದನ್ನೂ ಜನಕರಾಯನ ಪ್ರಾರ್ಥನೆಯನ್ನೂ ಕೇಳಿದ

ಮೇಲೆ ಒಂದು ವಿಘುಳಿಗೆಯಾದರೂ ವಿಳಂಬಿಸುವನೇ? ಪುತ್ರರ ವಿವಾಹೋತ್ಸವಗಳಿಗೆ ಬೇಕಾದ ಸಕಲ ಸನ್ನಾಹಗಳನ್ನೂ ಶೇಖರಿಸಿಕೊಂಡು, ವಸಿಷ್ಠ-ವಾಮದೇವಾದಿ-ಪುರೋಹಿತಾಮಾತ್ಯರೇ ಮೊದಲಾದ ಸಕಲ ಸುಹೃದಾಪ್ತವರ್ಗವನ್ನೂ ಜೊತೆಗೊಂಡು ಬಂದಿರುವನು !.

ಸಿದ್ಧ :—ದಶರಥರಾಯನ ವೈಭವವು ಇಂದ್ರನ ವೈಭವವನ್ನೂ ಮೀರಿಸುವಂತಿರುವುದು !

ಚಾರಣ :—ಸಂದೇಹವೇನು ? ಜನಕರಾಯನ ವೈಭವಕ್ಕೆ ಎಣೆಯುಂಟೇ ? ಸುಕೃತಕ್ಕೆ ಸಾಟಿಯುಂಟೇ ? ಪುಣ್ಯಕ್ಕೆ ಪರಿಮಿತಿಯುಂಟೇ ? ಅಬ್ಬ ! ಜ್ಞಾನ, ನಿಧಾನ, ದಾನ, ಸನ್ಮಾನಗಳೆಲ್ಲದರಲ್ಲಿಯೂ ಅದ್ವಿತೀಯನೆನ್ನಿಸಿದ ಈ ರಾಜರ್ಷಿಯ ಸುಖ-ಸಂತೋಷಗಳಿಗೆ ತುದಿ ಮೊದಲೇ ಇಲ್ಲ.

ಸಿದ್ಧ:—ನಿಜ, ಪಿತರಣಾಶಾಲಿಯಾದ ಜನಕನು, ದಶರಥರಾಯನಿಗೆ ಸ್ವಾಗತವಿತ್ತು, ಉಪಚರಿಸಿ ಕರೆತಂದ ರೀತಿಯೂ, ತಮ್ಮನಾದ ಕುಶಧ್ವಜನನ್ನು ಅಂತಃಕರಣಪೂರ್ವಕ ಆಶೀರ್ವದಿಸಿ, ಆದರದಿಂದ ಕರೆದು ತನ್ನೊಡನೆ ಯಜ್ಞಕಾರ್ಯಗಳಲ್ಲಿ ಸಹಾಯಕನಾಗಲು ನೇಮಿಸಿದುದೂ ಕನ್ಯೆಯರ ವಿವಾಹ-ಮಂಗಳಕಾರ್ಯಗಳಲ್ಲಿ ಮುಂದಾಗಿನಿಂತು ಕಾರ್ಯನಿರ್ವಾಹಕನಾಗುವಂತೆ ಮಾಡಿದುದೂ ಅಭಿನಂದನೀಯ ವಿಷಯಗಳು.

ಚಾರಣ :—ದಶರಥರಾಯನು ಪುತ್ರರ ವಿವಾಹಕ್ಕಾಗಿ ಮಾಡಿದ ದಾನಧರ್ಮಂಗಳ ಮಹತ್ವವನ್ನು ವಿವರಿಸಲಾದೀತೇ? ಪುತ್ರರ, ವ್ರತಸಮಾವರ್ತನಕಾಲಕ್ಕೆ ಸರಿಯಾಗಿ ಬಂದ ಭರತನ ಸೋದರಮಾವನಾದ ಯುಧಾಜಿತ್ತಿನ ವಿಶ್ವಾಸವು ಶ್ಲಾಘ್ಯವಾದುದಲ್ಲವೇ ? ಕರೆಯಿಸಿದಂತೆ ಬಂದನೆಂಬ ಸಂತೋಷದಿಂದ ದಶರಥರಾಯನು ಆತನನ್ನೆಷ್ಟು ಸನ್ಮಾನಿಸಿದನು !

ಸಿದ್ಧ :—ಅದುಸರಿ, ವಸಿಷ್ಠರು ಜನಕರಾಯನಿಗೆ ಹೇಳಿದ ಇಕ್ಷ್ವಾಕುವಂಶಕ್ರಮವೂ, ಜನಕನು ಹೇಳಿದ ನಿಮಿವಂಶಕ್ರಮವೂ ಮತ್ತೆಮತ್ತೆಯೂ ಕೇಳುವಂತಿದ್ದುವು. ವಸಿಷ್ಠವಿಶ್ವಾಮಿತ್ರರು, ದಶರಥ ಪುತ್ರರಿಗೆ-ರಾಮಲಕ್ಷ್ಮಣರಲ್ಲದೆ, ಭರತಶತ್ರುಘ್ನರಿಗೂ, ಜನಕ-ಕುಶಧ್ವಜರ ಪುತ್ರಿಯರನ್ನಿತ್ತು ವಿವಾಹ ಬೆಳೆಸಬೇಕೆಂದುಹೇಳಿದುದಕ್ಕೆ, ಜನಕನು ಪಟ್ಟ ಆನಂದವನ್ನೂ, ಆತನು ವಸಿಷ್ಠವಿಶ್ವಾಮಿತ್ರರಿಗೆ ಸರ್ವತಂತ್ರಸತಂತ್ರವಾದ ಯಾಜಮಾನ್ಯವನ್ನೂ ವಹಿಸಿ-ಪ್ರಾರ್ಥಿಸಿದುದನ್ನೂ ನೋಡಿದರೆ, ವಿನಯ-ಬ್ರಾಹ್ಮಣಭಕ್ತಿ-ಶ್ರದ್ಧಾದಿಗುಣಗಳಿಗೆ ಈತನೇ ಜನ್ಮಸ್ಥಾನವೆನ್ನಬೇಕಲ್ಲವೆ ?

ಚಾರಣ:—(ನಾಲ್ಕು ಕಡೆಯನ್ನೂ ನಿರೀಕ್ಷಿಸಿ) ಅದೋ, ದೇವತೆಗಳೊಡನೆ ಇಂದ್ರನೇ ಶ್ರೀರಾಮನ ವಿವಾಹವನ್ನು ನೋಡಲು ವಿಮಾನಾರೂಢನಾಗಿ ಬರುತ್ತಿರುವನು, ನೋಡುನೋಡು.

ಸಿದ್ಧ :—ಅಹುದು ; ಜನಕಮಹಾರಾಯನ ಯಜ್ಞಪೂರ್ತಿಯಾಗಿ, ವಿವಾಹವು ನಡೆಯಬೇಕಾದ ಸುಮುಹೂರ್ತವೇ ಇದು. ಈಗಲೇ ಜನಕನು ಕನ್ಯಾದಾನ ಮಾಡುವವನಾಗಿರಬಹುದು.

(ತೆರೆಯಲ್ಲಿ ವಾದ್ಯ ಕೋಲಾಹಲವಾಗುವುದು)

||ತೆರೆಯಲ್ಲಿ|| ಯಾರಲ್ಲಿ, ಸುವಾಸಿನಿಯರು ಮಂಗಳ ದ್ರವ್ಯಗಳೊಡನೆ ಕಲಶಗಳನ್ನು ಹಿಡಿದುಕೊಂಡು ಮುಂದೆ ಬರಬೇಕು. ಬ್ರಾಹ್ಮಣರು ಫಲಮಂತ್ರಗಳನ್ನು ಹಿಡಿದು ಸ್ವಸ್ತಿಯನ್ನು ಹೇಳುತ್ತಾ ಮುಂದೆ ನಡೆಯಬೇಕು. ಈಗಲೇ ಕನ್ಯಾದಾನಕ್ಕಾಗಿ ವರರನ್ನು ಸನ್ಮಾನಿಸಿ ಕರತರಬೇಕಾಗಿರುವುದು.

ಸಿದ್ಧ :— (ನಿರೀಕ್ಷಿಸಿ) ಅದೋ-ಅದೋ, ಜನಕಪುತ್ರನು ದಶರಥರಾಯನ ಬಿಡಾರಕ್ಕೆ ವರರನ್ನು ಕರತರಲು ಹೋಗುತ್ತಿರುವ ಸಡಗರವನ್ನು, ನೋಡು-ನೋಡು.

ಚಾರಣ :—(ಮುಂದಕ್ಕಡಿಯಿಟ್ಟು, ನೋಡಿ-ಹಿಮ್ಮೆಟ್ಟಿ)-ತೇಜೋವಿರಾಜಮಾನರಾದ ವಸಿಷ್ಠರು, ಏನೋ ಅವಸರದಿಂದ ಇತ್ತಕಡೆಗೇ ಬರುತ್ತಿರುವರು.

ಸಿದ್ಧ :—[ಅ ೧.] ಅಬ್ಬ! ಇವರ ತೇಜಸ್ಸೂ, ತಪಶ್ಶಕ್ತಿಯೂ, ಶಾಸನವೂ ಅಪ್ರತಿಹತವಾದುದು! ಮಹಾನುಭಾವರಾದ ಇವರನ್ನು ಪುರೋಹಿತರನ್ನಾಗಿ ಪಡೆದಿರುವ ದಶರಥನಿಗೆ ಅಸಾಧ್ಯವಾದುದೇನುಂಟು? ಇವರು ಜನಕರಾಯನ ಬಳಿಗೇ ಬರುತ್ತಿರುವಂತೆ ಕಾಣುತ್ತಿದೆ; ನಾವೂ ಇವರನ್ನೇ ಅನುಸರಿಸುವ, ನಡೆ! (ಹೊರಡುವರು)

(ಶುಭ್ರಾಂಬರಧಾರಿಯಾದ ವಸಿಷ್ಠನ ಪ್ರವೇಶ)

ವಸಿಷ್ಠ :—(ಪ್ರವೇಶಿಸಿ) ಇಕ್ಷ್ವಾಕು-ನಿಮಿವಂಶಗಳೆರಡೂ ಬಹುಪ್ರಸಿದ್ಧಗಳೂ ಪಾವನಗಳೂ ಆದುವುಗಳು. ಇವೆರಡು ವಂಶಗಳೂ ಪರಸ್ಪರ ಸಂಬಂಧವನ್ನು ಬೆಳೆಯಿಸುವುದರಿಂದ ಲೋಕಕ್ಕೇ ಅತಿಶಯ ಕ್ಷೇಮಲಾಭವುಂಟಾಗುವುದರಲ್ಲಿ ಸಂದೇಹವಿಲ್ಲ. ಇರಲಿ; (ತೆರೆಯ ಕಡೆ ನೋಡಿ) ಇದೋ ಜನಕರಾಯನು ನನ್ನ ಕಡೆಗೇ ಬರುತ್ತಿರುವನು! ಜ್ಞಾನ ಭಕ್ತಿ ವೈರಾಗ್ಯಗಳಲ್ಲಿ ಈತನು ಅದ್ವಿತೀಯನು!

ಜನಕ :—(ಮುಂದೆ ಬಂದು ಕೈಜೋಡಿಸಿ) ಪೂಜ್ಯರೇ! ಅನುಗ್ರಹಿಸಬೇಕು.

ವಸಿಷ್ಠ :—ಎಲೈ, ರಾಜರ್ಷಿಯಾದ ಜನಕನೇ! ದಶರಥನು ನಾಲ್ವರು ಸುಕುಮಾರರಿಂದಲೂ ನಡೆಯಿಸಬೇಕಾದ ಶುಭಕಾರ್ಯಗಳೆಲ್ಲವನ್ನೂ ನಡೆಯಿಸಿ, ನಿನ್ನ ಆಗಮನವನ್ನೇ ನಿರೀಕ್ಷಿಸುತ್ತಿರುವನು. ಇನ್ನು ವಿಳಂಬಿಸುವುದು ಸರಿಯಲ್ಲ. ಸೋದರನೊಡನೆ ಶೀಘ್ರವಾಗಿ ಕನ್ಯೆಯರನ್ನು ದಾನಮಾಡುವುದು ಶ್ರೇಯಸ್ಕರವು.

ಜನಕ:—ಪೂಜ್ಯರೇ! ವಿವಾಹಮಂಟಪದಲ್ಲಿ ಸಕಲವೂ ಸಿದ್ಧವಾಗಿರುವುದು. ನಾಲ್ವರು ಕನ್ಯೆಯರೂ ಮಂಗಳಕಾರ್ಯಗಳನ್ನು ನೆರವೇರಿಸಿ ಒಂದು, ವಿವಾಹವೇದಿಕೆಯಲ್ಲಿ ಕುಳಿತಿರುವರು. ನಾವೆಲ್ಲರೂ ಕನ್ಯಾದಾನಮಾಡುವುದಕ್ಕೆ ಪ್ರತಸ್ಥರಾಗಿ ಪುತ್ರರೊಡಗೂಡಿದ ದಶರಥಮಹಾರಾಯನ ಆಗಮನ ನಿರೀಕ್ಷಣೆಯಲ್ಲಿರುವೆವು. ದಶರಥನನ್ನು ಕರತರಲು ಪುತ್ರನನ್ನು ಕಳುಹಿರುವೆನು. ತಾವು ದಯೆಯಿಟ್ಟು ತ್ವರೆಪಡಿಸಿ, ಶುಭಕಾರ್ಯವನ್ನು ನಡೆಯಿಸಬೇಕು.

ವಸಿಷ್ಠ:—ಹಾಗಾದರೆ, ನೀನು ಸಿದ್ಧನಾಗಿರು; ನಾವು ಈಗಲೇ ಸುಕುಮಾರರೊಡನೆ ಬರುವೆವು.

ಜನಕ:—(ಕೈಜೋಡಿಸಿ) ಅಪ್ಪಣೆಯಂತೆ ನಾವು ವಿವಾಹಮಂಟಪದಲ್ಲಿ ನಿರೀಕ್ಷಿಸುವೆವು. (ಇಬ್ಬರೂ ಹೊರಡುವರು)

[ವಿವಾಹಮಂಟಪದಲ್ಲಿ ಜನಕ-ಕುಶಧ್ವಜರು, ಮಂತ್ರಿ ಪುರೋಹಿತ ಸೇನಾಪತಿಗಳ ಮತ್ತು ಪ್ರೇಕ್ಷಕರಾದ ರಾಜರೊಡನೆ ಕುಳಿತಿರುವರು. ಸುವಾಸಿನಿಯರೂ, ಬ್ರಾಹ್ಮಣರೂ ದ್ವಾರದಲ್ಲಿ ಕಲಶ ಕನ್ನಡಿ, ಫಲ ತಾಂಬೂಲಗಳನ್ನು ಹಿಡಿದು ನಿಂತಿರುವರು. ಸೀತಾ, ಊರ್ಮಿಳಾ, ಮಾಂಡವಿ, ಶ್ರುತಕೀರ್ತಿಯರು ಸಖಿಯರೊಡನೆ ರಾಣಿವಾಸದವರಿದ್ದ ಅಂತರಪಟದ ಮುಂದೆ ಕುಳಿತಿರುವರು.]

ಜನಕ:—(ಕುಶಧ್ವಜನನ್ನು ನೋಡಿ) ಅನುಜಾತ! ಹರರ ಆಗಮನವಾದಂತಿದೆ!

ಸಂಜುಕ:—ಮಹಾರಾಜನೇ! ಎಲ್ಲರೂ ಬಂದರು. ಆಯುಷ್ಮಂತರು ಮುಂದಾಗಿ ಬರುತ್ತಿರುವರು.

ಲಕ್ಷ್ಮೀನಿಧಿ (ಮುಂದೆ ಬಂದು) ಪಿತನೇ! ಎಲ್ಲರೂ ಬಂದರು.

|| ತೆರೆಯುಲ್ಲಿ || (ವಾದ್ಯ ಕೋಲಾಹಲವಾಗುವುದು.)

(ದಶರಥ, ವಸಿಷ್ಠ-ವಿಶ್ವಾಮಿತ್ರರು ರಾಮಲಕ್ಷ್ಮಣ ಭರತ ಶತ್ರುಘ್ನ ರೊಡನೆ ಬರುವರು)

ಜನಕ :—(ಕುಶಧ್ವಜ-ಶತಾನಂದರೊಡನೆ ಮುಂದೆ ನಿಂತು ಸನ್ಮಾನಪೂರ್ವಕವಾಗಿ ವೇದಿಕೆಯ ಬಳಿಗೆ ಕರತಂದು ಪಕ್ಕಕ್ಕೆ ತಿರುಗಿ) ಪೂಜ್ಯರಾದ ವಸಿಷ್ಠ-ವಿಶ್ವಾಮಿತ್ರರೇ! ತಾವೂ ನಮ್ಮ ಪುರೋಹಿತರೂ ಕೂಡಿ, ವಿವಾಹೋತ್ಸವವನ್ನು ಸಾಂಗಗೊಳಿಸಬೇಕು. (ದಶರಥನ ಕಡೆಗೆ ನೋಡಿ)-ಮಹಾರಾಜನೇ! ನೀನಿತ್ತ ಬಂದು ಸುಕುಮಾರರಿಂಗ ಕನ್ಯಾ ಪರಿಗ್ರಹಮಾಡಿಸಬೇಕು.

ವಸಿಷ್ಠ :—ಆಗಬಹುದು. ಸುಕುಮಾರನಾದ ಶ್ರೀರಾಮನೇ, ಮೂವರು ಸೋದರರೊಡನೆ, ಪಾಂಕ್ತನಾಗಿ ವಿವಾಹವೇದಿಕೆಯನ್ನಲಂಕರಿಸು. ದಶರಥಮಹಾರಾಯನೇ! ಸುಕುಮಾರರ ಬಳಿಯಲ್ಲಿ ನಿಲ್ಲು!

(ಲಕ್ಷ್ಮಣ, ಭರತ, ಶತ್ರುಘ್ನರೊಡನೆ ಶ್ರೀರಾಮನು ಜಗಲಿಯನ್ನೇರುವನು ; ದಶರಥನು ಬಳಿಯಲ್ಲಿ ನಿಲ್ಲುವನು.)

ವಸಿಷ್ಠ :—ಜನಕನೇ! ಇನ್ನು ನೀನು ಶ್ರೀರಾಮ ಲಕ್ಷ್ಮಣರಿಗೂ ನಿನ್ನ ತಮ್ಮನು ಭರತ ಶತ್ರುಘ್ನರಿಗೂ ಕನ್ಯೆಯರನ್ನೊಪ್ಪಿಸಬಹುದು.

ಜನಕ<br>ಕುಶಧ್ವಜರು } :—(ಸೀತಾ ಊರ್ಮಿಳೆಯರ, ಮಾಂಡವೀ ಶ್ರುತಕೀರ್ತಿಯರ ಕೈಹಿಡಿದು ಕರತಂದು ರಾಮಾದಿಗಳ ಮುಂದೆ ನಿಲ್ಲಿಸಿಕೊಂಡು ನಿಲ್ಲುವರು)—

ವಿಶ್ವಾ :—ಇನ್ನು ಕನ್ಯಾದಾನವಾಗಬಹುದು.

ಜನಕ : (ಸೀತೆಯ ಕೈಹಿಡಿದು ರಾಮನನ್ನು ಕುರಿತು) ಓ ಲೋಕಾಭಿರಾಮನಾದ ಶ್ರೀರಾಮನೇ ! ಇವಳೇ, ನನ್ನ ಪ್ರಿಯಪುತ್ರಿಯಾದ ಸೀತೆ. ನಾರೀಮಣಿಯಾದ ಇವಳನ್ನು ನಾನು ಪುರುಷಶ್ರೇಷ್ಠನಾದ ನಿನಗೆ ಆತ್ಮಾನಂದದಿಂದ ಒಪ್ಪಿಸಿರುವೆನು. ಇದೋ ಇವಳು, ನಿನಗೆ ಸಹಧರ್ಮಿಣಿಯಾಗಿರಲು ತಕ್ಕವಳು ! ಇವಳು ನೆಳಲಿನಂತೆ ನಿನ್ನನ್ನು ಅನುವರ್ತಿಸುವ ಸಾಧ್ವೀಶಿರೋಮಣಿಯಾದ ಪತ್ನಿಯಾಗಿರುವಳು. ಆದುದರಿಂದ ಇವಳನ್ನು ಪರಿಶುದ್ಧಭಾವದಿಂದ ನೋಡಿ, ಪಾಣಿಗ್ರಹಣಮಾಡು. ನಿನಗೆ ಮಂಗಳವಾಗಲಿ ! [ಅ. ೨.]

(ರಾಮನ ಹಸ್ತದಲ್ಲಿ ಸೀತೆಯು ಹಸ್ತವನ್ನು ಇರಿಸುವನು. ಪುರೋಹಿತರು ಸ್ವಸ್ತಿಯನ್ನು ಹೇಳುವರು. ದೇವದುಂದುಭಿ ನಾದಗಳೊಡನೆ ಪುಷ್ಪವೃಷ್ಟಿಯಾಗುವುದು )

ಜನಕ:—(ಊರ್ಮಿಳೆಯ ಕೈಯನ್ನು ಲಕ್ಷ್ಮಣನ ಕೈಯೊಳಗಿರಿಸಿ) ವತ್ಸ ! ಲಕ್ಷ್ಮಣನೇ ! ನನ್ನ ತನೂಭವೆಯಾದೀ ಊರ್ಮಿಳೆಯನ್ನು ನಿನಗೆ ಸಂತೋಷವಾಗಿ ಒಪ್ಪಿಸುವೆನು. ಇವಳು ಶಮದಮಾದಿ ಸುಗುಣಸಂಪನ್ನನಾದ ನಿನಗೆ ಅನುಕೂಲೆಯಾದ ಪತ್ನಿಯಾಗಿ ನಿನ್ನ ಆಜ್ಞೆಗೆ, ನಿನ್ನ ಇಚ್ಛೆಗೆ ವಿಧೇಯಳಾದ ಭಾರ್ಯೆಯಾಗಿ ವರ್ತಿಸುವಳು ಜಾಗ್ರತೆಯಾಗಿ ಇವಳ ಪಾಣಿಗ್ರಹಣ ಮಾಡು ; ನಿನಗೆ ಮಂಗಳವಾಗಲಿ. [ಅ. ೩.]

ಜನಕ :—(ತಮ್ಮನನ್ನು ನೋಡಿ) ಎಲೈ ಕುಶಧ್ವಜನೇ ! ನೀನೂ ಜಾಗ್ರತೆಯಾಗಿ ಕನ್ಯಾದಾನಮಾಡು, ಹೊತ್ತುಮೀರುವುದು.

ಕುಶಧ್ವಜ :—ಅಪ್ಪಣೆ ! (ಮಾಂಡವಿಯನ್ನು ಭರತನ ಹಸ್ತದಲ್ಲಿರಿಸಿ, ಆನಂದದಿಂದ) ಬಲವದ್ಗುಣಗಂಭೀರನೆ ! ಭವ್ಯಮಂಗಳಸ್ವರೂಪನೇ! ಭ್ರಾತೃವತ್ಸಲನಾದ ಭರತನೇ ! ಸಚ್ಚಾರಿತನಾದ ನಿನಗೆ, ನನ್ನ ತನೂಭವೆಯಾದ ಕ್ಷಮಾಗುಣ ಸಂಪನ್ನೆಯಾದ ಮಾಂಡವಿಯನ್ನು ಒಪ್ಪಿಸಿರು

ವೆನು. ಮನೋಜ್ಞೆಯಾದಿವಳು ನಿನಗೆ ಅನುಗುಣೆಯಾದ ಪತ್ನಿಯಾಗಿರಲು ತಕ್ಕವಳಾದುದರಿಂದ ಸಾದರದಿಂದಿವಳ ಪಾಣಿಗ್ರಹಣಮಾಡು. [ಅ. ೪]
(ಶ್ರುತಕೀರ್ತಿಯ ಹಸ್ತವನ್ನು ಶತ್ರುಘ್ನನ ಹಸ್ತದಲ್ಲಿರಿಸಿ) ಶೌರ್ಯಧುರಂಧರನೇ! ಶತ್ರುಭಯಂಕರನೇ! ಸತ್ಸಂಕಲ್ಪನಾದ ಶತ್ರುಘ್ನನೇ! ಸರ್ವಗುಣಸಂಪನ್ನೆಯಾದೀ ಎನ್ನ ಸುತೆ ಶ್ರುತಕೀರ್ತಿಯನ್ನು ನಿನಗೆ ಸಂತೋಷದಿಂದೊಪ್ಪಿಸಿರುವೆನು. ನೀನಿವಳ ಪಾಣಿಗ್ರಹಣಮಾಡು.

ಜನಕ :—ಸುಕುಮಾರರೇ! ನೀವು ನಾಲ್ವರೂ ಏಕಕಾಲದಲ್ಲಿ ನಮ್ಮೀ ಕನ್ಯೆಯರ ಪಾಣಿಗ್ರಹಣಮಾಡಿರಿ. ನಿಮಗೆ ಸಮಸ್ತ ಸನ್ಮಂಗಳಗಳೂ ಉಂಟಾಗಲಿ!

(ರಾಮಾದಿಗಳು ನಾಲ್ವರೂ ಪತ್ನಿಯರ ಪಾಣಿಗ್ರಹಣಮಾಡುವರು. ಋಷಿಗಳು ಸ್ವಸ್ತಿಯನ್ನು ಹೇಳುವರು. ದೇವದುಂದುಭಿವಾದ್ಯಂಗಳೊಡನೆ ಪುಷ್ಪವೃಷ್ಟಿಯಾಗುವುದು.)

ವಿಶ್ವಾ :—(ಆನಂದದಿಂದ) ಆಹಾ! ಜಗಜ್ಜನನೀಜನಕರಾದ ಸೀತಾರಾಮರ ನರಲೀಲಾವಿನೋದವ್ಯಾಪಾರವು ಅತ್ಯಂತ ಕೌತುಕವನ್ನುಂಟುಮಾಡುವಂತಹುದು! (ಸ್ವಗತ) ಈ ಶ್ರೀಶ-ಶರಣ್ಯಾದಂಪತಿಗಳ ಸಮ್ಮಿಲನಕಾರ್ಯದಲ್ಲಿ ನನ್ನನ್ನೇ ಮುಖ್ಯ ಕಾರ್ಯನಿರ್ವಾಹಕರಾಗಿ ನಡೆಯುವಂತೆ ಪ್ರೇರಿಸಿ ಕಾರ್ಯಕಾರಣಗಳನ್ನು ಕಲ್ಪಿಸಿದ ಈ ಮಹಾಪುರುಷನ ಸಂಕಲ್ಪವೇ ಸಂಕಲ್ಪವು! [ಅ ೬.] (ಮೇಲೆ ನೋಡಿ ಸಂತೋಷದಿಂದ ತಲೆದೂಗುತ್ತ) ಈ ಮಹಾಪುರುಷನ ವಿವಾಹೋತ್ಸವದಲ್ಲಿ ದೇವತೆಗಳು ಎಷ್ಟು ಉತ್ಸಾಹಿಗಳಾಗಿರುವರು! “ಇನ್ನೀತನಿಂದಾಗಬೇಕಾದ ದುಷ್ಟನಿಗ್ರಹ-ಶಿಷ್ಟಪರಿಗ್ರಹಾದಿ ಮಹಾಕಾರ್ಯಗಳಿಗೆ ಈ ಜಾನಕಿಯೇ ಮೂಲಶಕ್ತಿಯಾಗಿ ನಿಂತು ನಡೆಯಿಸುವಳೆಂದು” ಅವರೆಷ್ಟು ಆನಂದದಿಂದ ಕೊಂಡಾಡುತ್ತಿರುವರು!

ವಸಿಷ್ಠ :—(ವಿಶ್ವಾಮಿತ್ರನ ಕೈಹಿಡಿದು ಸ್ನೇಹದಿಂದ) ಮಿತ್ರನೇ! ವಿಶ್ವಾಮಿತ್ರನೆಂಬ ನಾಮವು ನಿನಗೀಗಲೀಗ ಅನ್ವರ್ಥವಾಯ್ತು ! ನಿನ್ನ ಪ್ರಯತ್ನವು ಸಫಲವಾಗಿ, ಈ ಶ್ರೇಷ್ಠ ದಂಪತಿಗಳ ಸಮ್ಮಿಲನವಾದುದರಿಂದ ವಿಶ್ವವೇ ನಿನ್ನನ್ನು ಕೃತಜ್ಞತೆಯಿಂದ ಕಾಣುತ್ತಿರಬೇಕೆಂದು ತಿಳಿದು ನಿನಗೆ ಧನ್ಯವಾದವಾಡುವೆನು.

ವಿಶ್ವಾ :—(ಸಾದರದಿಂದ) ಆರ್ಯನೇ ! ಇವೆಲ್ಲವೂ ನಿನ್ನ ಮೈತ್ರಿಯಿಂದಾದುದು !

ಶತಾ :—(ವಸಿಷ್ಠ ವಿಶ್ವಾಮಿತ್ರರಕಡೆಗೆ ತಿರುಗಿ) ಪೂಜ್ಯರೇ ! ಅಮೋಘಶಾಸನರಾದ ತಮ್ಮಿರ್ವರ ಯೋಗಪ್ರಭಾವದಿಂದಾದೀ ಉತ್ಸವವು ಜಗತ್ತಿಗೇ ಆನಂದವನ್ನುಂಟುಮಾಡಿತೆಂಬುದರಲ್ಲಿ ಸಂಶಯವಿಲ್ಲ.

ವಿಶ್ವಾ : —ಎಲೈ ದಶರಥರಾಯನೇ ! ನಿನ್ನ ಪುತ್ರರನ್ನು ಕರೆದುಕೊಂಡುಬಂದು ನಿನ್ನ ವಶಕೊಪ್ಪಿಸಿರುವೆನು. ಇನ್ನು ನನ್ನ ಕೆಲಸವಾಯಿತು. ನಾನಿನ್ನು ಹಿಮವತ್ಪರ್ವತಕ್ಕೆ ಹೊರಟುಹೋಗಬಹುದಷ್ಟೆ ? ಎಲೈ ಜನಕನೇ ! ರಾಜರ್ಷಿಶ್ರೇಷ್ಠನೂ ಜ್ಞಾನಪೂರ್ಣನೂ ಆದ ನಿನ್ನಲ್ಲಿ ನನಗೆ ಅತ್ಯಂತ ವಿಶ್ವಾಸವುಂಟಾಗಿರುವುದು. ಆದರೂ ನಾನಿನ್ನು ನಿಲ್ಲಲಾರೆನು. ನಾನು ಬಂಧುವಾದ ನೀನು ನನಗಿನ್ನು ಅನುಮತಿಯನ್ನು ಕೊಡು.

ದಶರಥ :—ಪೂಜ್ಯರೇ ! ನಮ್ಮ ಸಕಲವಿಧ ಶ್ರೇಯಸ್ಸಿಗೂ ಕಾರಣರಾಗಿರುವ ತಮ್ಮಲ್ಲಿ ನಾನು ಪ್ರಾರ್ಥಿಸುವುದೇನು ? ತಾವು ಕೃಪೆಯಿಂದ, ಇನ್ನು ಸ್ವಲ್ಪಕಾಲ ನಮ್ಮ ಬಳಿಯಲ್ಲಿರಬೇಕು ಇಷ್ಟೇ ನನ್ನ ಪ್ರಾರ್ಥನೆ.

ವಸಿಷ್ಠ :—ಅದುದು, ನಮ್ಮ ಅಭಿಮತವೂ ಅಷ್ಟೇ ! ಇನ್ನೇನು, ವಿವಾಹಕಾರ್ಯವು ಸಾಂಗವಾದೊಡನೆ ದಶರಥನು ಅಯೋಧ್ಯೆಗೆ ಪುತ್ರ

ರನ್ನೂ ಪುತ್ರವಧುಗಳನ್ನೂ ಜೊತೆಗೊಂಡು ಹೊರಡುವನು. ಆವರೆಗೆ ಏನೂ ಇಲ್ಲದ್ದು ಹೊರಡಬಹುದು.

ಜನಕ :—ಪೂಜ್ಯರೇ! ನಾನುಜನಾಗಿ ನಾನೂ ಅದನ್ನೇ ಪ್ರಾರ್ಥಿಸುವೆನು.

ಶತಾನಂದ :—ಮಹಾತ್ಮರೇ! ಇನ್ನು ವಿವಾಹಕ್ಕೆ ಅಂಗವಾಗಿರುವ ಹೋಮ-ಪ್ರದಕ್ಷಿಣಾದಿಗಳನ್ನು ನೆರವೇರಿಸಿ ಶುಭಮುಹೂರ್ತದಲ್ಲಿ ವಧುಗಳನ್ನು ಶ್ವಶುರಗೃಹಕ್ಕೆ ಕಳುಹಬೇಕಾಗಿರುವುದು. ಆವರೆಗೆ ತಾವೂ ಇರಬೇಕೆಂಬುದು ನನ್ನ ಪ್ರಾರ್ಥನೆ.

ವಿಶ್ವಾ :—ಆಗಲಿ, ಹಾಗಾದರೆ ಇನ್ನು ದೇವತಾಸನ್ನಿಧಿಗೆ ನಡೆಯಿರಿ :—ಅಲ್ಲಿಯೇ ಹೋಮ-ಪ್ರದಕ್ಷಿಣಾದಿಗಳು ನಡೆಯಲಿ.

|| ತೆರೆಯಲ್ಲಿ|| (ಸುವಾಸಿನಿಯರು ವಧೂವರರನ್ನು ಹಸೆಗೆ ಕರೆಯುವರು)

ಜನಕ :— (ಲಕ್ಷ್ಮೀನಿಧಿಯನ್ನು ನೋಡಿ) ಆಯುಷ್ಮಂತನೇ! ಬ್ರಾಹ್ಮಣ-ಸುವಾಸಿನಿಯರಿಗೆ ಯಥೇಷ್ಟ ದಕ್ಷಿಣಾ ತಾಂಬೂಲಗಳನ್ನೂ ನಮ್ಮ ರಾಜಬಂಧುಗಳಿಗೆಲ್ಲ ಉಡುಗೊರೆ ಉಚಿತಾದಿಗಳನ್ನೂ ಕೊಡುವುದರಲ್ಲಿ ಜಾಗರೂಕನಾಗಿರು. (ವಸಿಷ್ಠಾದಿಗಳನ್ನು ಕುರಿತು) ಪೂಜ್ಯರೇ! ಎಲ್ಲರೂ ಚಿತ್ತೈಸಬೇಕು. (ರಾಮಾದಿಗಳನ್ನು ನೋಡಿ) ಸುಕುಮಾರರೇ! ಪತ್ನಿಯರೊಡನೆ ದೇವತಾಸಾನ್ನಿಧ್ಯಕ್ಕೆ ಬನ್ನಿರಿ.

(ಎಲ್ಲರೂ ಹೊರಡುವರು)

(ಅರಮನೆಯ ಮುಂಗಡೆ ಉಡುಗೊರೆ ದಕ್ಷಿಣಾ ತಾಂಬೂಲಗಳೊಡನೆ ಬ್ರಾಹ್ಮಣರ ಪ್ರವೇಶ)

೧ ನೇ :—ಅಬ್ಬಬ್ಬಾ! ದಾನಶೂರ, ಧರ್ಮವೀರ, ಸದ್ಗುಣಗಂಭೀರ, ಮಹಾಪುರುಷನೆಂದರೆ ಜನಕರಾಯನಪ್ಪಾ! ಆ ಮೂರಾಯನಿಗೆ ಏನುಜ್ಞಾನ! ಎಷ್ಟು ಧರ್ಮಶ್ರದ್ಧೆ! ಎಷ್ಟುಧಾರಾಳಬುದ್ಧಿ!

೨ ನೇ :—ಆವನಿಗೆ ಅನುಗುಣವಾದ ತಮ್ಮ ಕುಶಧ್ವಜ ಮಹಾರಾಯ, ಎಷ್ಟು ಉದಾರಿ, ಪುತ್ರಿಯರ ವಿವಾಹಕ್ಕೆ ಎಷ್ಟೊಂದು ವ್ಯಯ ಮಾಡಿರುವನೋ!

೩ ನೇ :—ಇವರೆಲ್ಲರನ್ನೂ ಮೀರಿಸುವನಪ್ಪ-ಮಹಾರಾಜಾ ದಶರಥರಾಯ! ಆತನ ಪುಣ್ಯಕ್ಕೆ ಎಣೆಯೇ ಇಲ್ಲ. ಎಲ್ಲರೂ ಅವನಿಗೆ ಕೈಮುಗಿಯಬೇಕು.

೪ ನೇ :—ನಿಜ ನಿಜ; ಮಹಾಪುರುಷರಾದ ರಾಮ ಲಕ್ಷ್ಮಣರಿಗೆ ತಂದೆಯೂ, ಲೋಕೋತ್ತರೆಯರಾದ ಸೀತಾ ಊರ್ಮಿಳೆಯರಿಗೆ ಮಾವನೂ ಆದವನಿಗೆ ಜಗತ್ತೇ ಕೈಯೆತ್ತಿ ಮುಗಿಯಬೇಕು.

|| ತೆರೆಯಲ್ಲಿ || "ನಮ್ಮ ಮಹಾರಾಜಾ ಜನಕರಾಯನು ಎಲ್ಲರಿಗೆ ಹೀಗೆ ನಿವೇದಿಸಿರುವನು"

ಬ್ರಾಹ್ಮಣರು :—ಏನು-ಏನು, ಮಹಾರಾಜನು ನಮಗೆಲ್ಲ ನಿವೇದಿಸುವನೇ? ಏನನ್ನು!

|| ತೆರೆಯಲ್ಲಿ || "ಶ್ವಶುರಗೃಹಕ್ಕಾಗಿ ಹೊರಟಿರುವ ನಮ್ಮ ಸುಕುಮಾರಿಯರನ್ನು ಸಕಲ ಸಂಭಾರಸಾಹಿತ್ಯ ಸಹಿತ ಬಳುವಳಿಗಳೊಡನೆ ಕಳುಹುವೆವು. ಪತಿಗಳೊಡನೆ ಪಯಣಮಾಡುವ ಪುತ್ರಿಯರ ಉತ್ಸವವನ್ನು ನೋಡಿ ನೀವೂ ನಮ್ಮ ಆನಂದದಲ್ಲಿ ಭಾಗಿಗಳಾಗಬೇಕು."

ಬ್ರಾಹ್ಮಣ :—ಆಹಾ! ಎಂತಹ ಪ್ರಜಾನುರಾಗಿ ಮಹಾರಾಜನಪ್ಪ! ನೂರಾರು ವರ್ಷ ಪುತ್ರ ಪೌತ್ರಾಭಿವೃದ್ಧಿಯಿಂದ ಸುಖಿಯಾಗಿರಲಿ. ನಡೆ; ಆ ಧನ್ಯಾತ್ಮನ ಆನಂದದಲ್ಲಿ ನಾವೂ ಭಾಗಿಗಳಾಗುವ. [illegible] ಮತ್ತೂ ಸಿಂಗಾರವಾದ [illegible] ನೋಡಬೇಕೆನ್ನಿಸುವುದು.

([illegible] ಎಲ್ಲರೂ ಹೊರಡುವರು)

## ಅಯೋಧ್ಯೆಗೆ ಹೋಗುವ ಮಾರ್ಗದಲ್ಲಿ.

[ದಶರಥರಾಯನು ರಾಮ ಲಕ್ಷ್ಮಣ ಭರತ ಶತ್ರುಘ್ನರನ್ನೂ, ಸೀತಾ ಊರ್ಮಿಳಾ ಮಾಂಡವೀ ಶ್ರುತಕೀರ್ತಿಯರನ್ನೂ ರಥಗಳಲ್ಲಿ ಕುಳ್ಳಿರಿಸಿಕೊಂಡು ತಾನೂ ಕುಳಿತು, ವಸಿಷ್ಠ ವಾಮದೇವಾದಿ ಋಷಿಗಳನ್ನು ಮುಂದುಮಾಡಿ, ಸಚಿವ ಸೇನಾಪತಿ ಸಹಿತ ಸಕಲ ಪರಿವಾರದೊಡನೆ ಪ್ರವೇಶಿಸುವನು.]

ದಶರಥ:—ಪೂಜ್ಯರೇ! ಆಗಲೇ ಮಿಥಿಲಾನಗರವನ್ನು ದಾಟಿ ಬಹುದೂರ ಬಂದೆವು. ಸಾನುಜನಾದ ಜನಕರಾಯನನ್ನೂ ಮಹಾನುಭಾವನಾದ ವಿಶ್ವಾಮಿತ್ರನನ್ನೂ ಬೀಳ್ಕೊಟ್ಟುದರಿಂದ ಮನಸ್ಸು ವ್ಯಗ್ರವಾಗಿರುವುದು. ಕ್ಷಣೇಕ್ಷಣೇ ಅವರ ಸ್ನೇಹ, ವಿಶ್ವಾಸ, ಆದರಗಳೂ, ಅವರು ಮಾಡಿರುವ ಪರಮೋಪಕಾರವೂ ಸ್ಮರಣೆಗೆ ಬಂದಂತೆಲ್ಲಾ ಅವರ ವಿರಹವು ತಾಪವನ್ನುಂಟುಮಾಡುತ್ತಿರುವುದು.

ವಸಿಷ್ಠ:—ಸತ್ಸಂಗತಿಯ ಪ್ರಭಾವವೇ ಹಾಗಿರುವುದು. ವಿಶ್ವಾಮಿತ್ರರು ಇಷ್ಟು ಕಾಲವಿಲ್ಲಿದ್ದುದೇ ಹೆಚ್ಚಿನ ಮಾತು. ಇನ್ನೂ ನಿನ್ನಲ್ಲಿರಬೇಕೆಂದರೆ ಹೇಗೆ ನಿಂತಾರು? ತಪಸ್ವಿಗಳಾಗಿ ಅವರು ಸ್ವಸ್ಥಳಕ್ಕೆ ಹೊರಟುಹೋದರು. ಜನಕರಾಯನಂತು ರಾಜ್ಯಪರಿಪಾಲಕನು. ಸ್ನೇಹಪರನೂ, ಪರಮ ಧಾರ್ಮಿಕನೂ, ಜ್ಞಾನಸಂಪನ್ನನೂ ಆದ ಆತನನ್ನು ಬಿಟ್ಟುಬಂದುದರಿಂದ ಮನಸ್ಸು ಖಿನ್ನವಾಗುವುದು ಸಹಜ. ಸತ್ಸಹವಾಸವು ಎಷ್ಟು ಆನಂದದಾಯಕವಾದುದೋ ಅವರ ವಿರಹವೂ ಅಷ್ಟೇ ತಾಪದಾಯಕವು.

ದಶರಥ:—(ಮೇಲೆಯೂ ಸುತ್ತಲೂ ನೋಡಿ ಸಖೇದಾಶ್ಚರ್ಯಗಳಿಂದ ವಸಿಷ್ಠನನ್ನು ಕುರಿತು) ಪೂಜ್ಯರೇ! ಅತ್ತ ನೋಡಬೇಕು! ಭಯವನ್ನು ಸೂಚಿಸುವ ದುಶ್ಶಕುನವಾಗಿ, ಪಕ್ಷಿಗಳು ಭಯಂಕರವಾಗಿ ಕೂಗುತ್ತ ನನಗೆ ಕಳವಳವನ್ನುಂಟುಮಾಡಿರು

ವುದು—ಇದರಿಂದಾಗುವ ಅಪಕಂಟಕವೇನಿರಬಹುದೋ ತಿಳ್ಳಣ ಗೊಂಡಿರುವೆನು; ಅನುಗ್ರಹಿಸಬೇಕು. [ಅ. ೯.]

ವಸಿಷ್ಠ:—ಎಲೈ ರಾಜನೇ, ಸ್ವಸ್ಥಚಿತ್ತನಾಗು. ಅಧೈರ್ಯ ವನ್ನು ಬಿಡು. ಈ ದುಶ್ಶಕುನವು ಮುಂದೆ ಯಾವುದೋ ಭಯವನ್ನು ಸೂಚಿಸುವುದಾದರೂ, ಅದೋ ನಿಧಾನಿಸಿ ನೋಡು. [ಅ. ೧೦.]

"ಮೃಗಗಳು ಹೇಗೆ ಎಷ್ಟು ಉಲ್ಲಾಸವಾಗಿ ನಮಗೆ ಪ್ರದಕ್ಷಿಣ ವಾಗಿ ಬರುತ್ತಿರುವುವು! ಈ ಶುಭಶಕುನಗಳಿಂದ ಜಯವೂ, ಅಪಾರ ವಾದ ಯಶಸ್ಸೂ, ಆನಂದವೂ ಉಂಟೆಂದು ತಿಳಿದುಬರುವುದರಿಂದ— ಮೊದಲು ಬರಬಹುದಾದ ಭಯವು, ಕ್ಷಣಮಾತ್ರದಲ್ಲಿ ಪರಿಹಾರ ವಾಗಿ, ಪರಮಾತ್ಮನ ಕೃಪೆಯಿಂದ ಸುಕ್ಷೇಮವೇ ಆಗುವುದೆಂದು ಸ್ವಸ್ಥನಾಗಿರು.

ದಶರಥ:—ಮಹಾತ್ಮರೇ, ನನ್ನ ಮನಸ್ಸಿಗೆ ಇನ್ನೂ ಕಳವಳವು ತಪ್ಪಿಲ್ಲವಾದುದರಿಂದ ಇಲ್ಲಿ ಎಲ್ಲಿಯೂ ನಿಲ್ಲದೆ ಪಯಣವನ್ನು ಜಾಗ್ರತೆ ನಡಿಸುವ.

ವಸಿಷ್ಠ:—ಆಗಬಹುದು. (ಎಲ್ಲರೂ ಗಮನವನ್ನು ಅಭಿನಯಿ ಸುವರು.)

(ತೆರೆಯಲ್ಲಿ ಕೋಲಾಹಲವಾಗುವುದು.)

ದಶರಥ:—(ಶಂಕಿತನಾಗಿ ನೋಡಿ) ಮಹಾತ್ಮನ್, ಕೃಪಾ ಕಟಾಕ್ಷದಿಂದಿತ್ತ ನಿರೀಕ್ಷಿಸಬೇಕು. ಇದೇನೋ ವಿಪರೀತವಾಗಿ ಕಾಣುತ್ತಿರುವುದು. ಮಹತ್ತರವಾದ ಸುಂಟರುಗಾಳಿಯ ಹೊಡೆತ ದಿಂದಲೂ ಧೂಳಿಯಿಂದಾವೃತವಾಗಿ ದಿಕ್ಕುಗಳೇ ಕಾಣದಂತೆ ಕತ್ತಲೆ ಕವಿದುಕೊಂಡಿರುವುದರಿಂದಲೂ ನಮ್ಮ ಸೇನಾಸಮೂಹವು ಕಂಗೆಟ್ಟು ಕೂಗುತ್ತಿರುವುವು. ಈ ಉತ್ಪಾತವೇನೆಂದು ತಿಳಿದು ರಕ್ಷಿಸಿ. [ಅ. ೧೧.]

ವಸಿಷ್ಠ:—ಎಲೈ ರಾಯನೇ, ಭೀತಿಯನ್ನು ಬಿಡು. ಕಂಗೆಟ್ಟು ಕೂಗುತ್ತಿರುವ ಈ ಸೇನಾಸಮೂಹವನ್ನು ಸಂತೈಸುವಂತೆ ಮಾಡಿ, ನೀನೂ, ಪುತ್ರರೂ, ಪುತ್ರವಧೂ–ಪರಿವಾರದೊಡನೆ ಸುರಕ್ಷಿತವಾದ

ಸ್ಥಳದಲ್ಲಿದ್ದು ಸ್ವಲ್ಪ ವಿಶ್ರಮಿಸಿಕೊಂಡಿರು. ನಾನೂ ವಾಮದೇವನೊಡನೆ ಹೋಗಿ ಈ ಉತ್ಪಾತದ ಮೂಲವನ್ನು ತಿಳಿದು ಪರಿಹಾರೋಪಾಯವನ್ನು ಚಿಂತಿಸುವೆನು.

ದಶರಥ:—ಆರ್ಯರ ಅಪ್ಪಣೆಯಂತಾಗಲಿ. (ಹೋಗುವನು.)

ವಸಿಷ್ಠ:—(ವಾಮದೇವನೊಡನೆ ಮುಂದಕ್ಕಡಿಯಿಟ್ಟು ಸುತ್ತಲೂ ನೋಡುವನು.)

(ತೆರೆಯಲ್ಲಿ ಮತ್ತೆ ಕೋಲಾಹಲವಾಗುವುದು.)

॥ಗಗನದಲ್ಲಿ॥ ಇದೋ ಇದೋ, ದುರ್ಧರ್ಷನೂ ಧೀರಾಗ್ರೇಸರನೂ ಆದ ಭಾರ್ಗವರಾಮನು ಬಂದನು!–ಬಂದನು!!

ವಾಮದೇವ:—ಏನು ಏನು? ಭಾರ್ಗವರಾಮನು, ಕ್ಷತ್ರಿಯ ಕುಲಾಂತಕನಾದ ಜಮದಗ್ನಿ ಪುತ್ರನು ಬಂದನೇ! ಆತನ ದ್ವೇಷಾನಲವು ಇನ್ನೂ ಶಾಂತವಾಗಿಲ್ಲವೇ? ಈಗ ಬಂದ ಕಾರಣವೇನು?

ವಸಿಷ್ಠ:—ಭಾರ್ಗವರಾಮನ ಆಗಮನವು ಭಯಜನಕವಾಗಿದ್ದರೂ ಶಕುನಗಳಿಂದ, ಸರ್ವತ್ರ ಸುಖ–ಸಂತೋಷಗಳುಂಟಾಗುವುದೆಂದು ತಿಳಿಯುತ್ತಿದೆ. ಬರಲಿ, ನೋಡುವ!

॥ತೆರೆಯಲ್ಲಿ॥ "ಎಲ್ಲಿ–ಎಲ್ಲಿ, ಬಾಲನಾದ ದಶರಥರಾಮನೆಲ್ಲಿ?"

ವಸಿಷ್ಠ:—(ವಿಮರ್ಶಾಪೂರ್ವಕವಾಗಿ ನೋಡುತ್ತ) ಈತನ ಮುಖಭಾವವು ಪ್ರಶಾಂತವಾಗಿಯೂ ಕಾಂತಿಯುಕ್ತವಾಗಿಯೂ ಇರುವುದರಿಂದ ಆಗ್ರಹದಿಂದ ಬಂದಿರಲಾರನು. ಆದರೆ ರಾಮಚಂದ್ರನನ್ನು ಕೇಳುತ್ತ ಬರುವುದಕ್ಕೆ ಕಾರಣವೇನಿರಬಹುದು? ಆತ್ಮಸ್ವರೂಪ ಜ್ಞಾನದಿಂದ ಪರತತ್ವವನ್ನರಸುತ್ತಿರಬಹುದೋ? ಬರಲಿ, ನೋಡುವ!

[ಜಟಾವಲ್ಕಲಧಾರಿಯಾದ ಪರಶುರಾಮನು ಹೆಗಲಮೇಲೆ ಪರಶುವನ್ನೂ, ಎಡಗೈಯಲ್ಲಿ ಧನುಸ್ಸನ್ನೂ, ಬಲಗೈಯಲ್ಲಿ ಬಾಣಗಳನ್ನೂ ಧರಿಸಿ ಪ್ರವೇಶಿಸುವನು.]

ಭಾರ್ಗವರಾಮ :—ಎಲ್ಲಿ, ದಶರಥರಾಮನೆಲ್ಲಿ ? (ಕುತೂಹಲ ದಿಂದ ಸುತ್ತಲೂ ನೋಡುತ್ತ) ಎಲ್ಲಿ—ಯಾವ ದೇವ ಗಂಧರ್ವನನ್ನು ನೋಡಲಿ, ಆ ರಾಮನನ್ನು ಕೊಂಡಾಡತಕ್ಕವನೇ ! ಯಾರ ಬಾಯಲ್ಲಿ ನೋಡಿದರೂ ಆತನ ಪರಾಕ್ರಮ ಪ್ರಭಾವಗಳ ವರ್ಣನವೇ ! ಜಗತ್ತೇ ಆತನ ನಾಮ—ಗುಣ—ಸಂಕೀರ್ತನಗಳಲ್ಲಿ ತತ್ಪರವಾಗಿ ಹೋಗಿರು ವುದು !

(ವಿಚಾರಮಾಡಿ ನಕ್ಕು)

ಅಷ್ಟೇಕೆ, ನನಗೂ—ಆತನನ್ನೊಮ್ಮೆ ನೋಡಬೇಕೆಂಬ ಆತುರ ವುಂಟಾಗಿರುವುದೆಂದರೆ—ಹೇಳುವುದಿನ್ನೇನು ? (ನಸುನಕ್ಕು)

ಎಲ್ಲೆಲ್ಲಿಯೂ ತಾನೇತಾನಾಗಿರುವ ಆ ರಾಮನನ್ನು ಒಮ್ಮೆ ನೋಡಿಹೋಗಬೇಕೆಂದು ಬಂದೆನು. (ಮೇಲೆ ನೋಡಿ ನಕ್ಕು) ಅದೋ, ಆ ದೇವತೆಗಳೆಲ್ಲರೂ ನನ್ನನ್ನೇ ನೋಡುತ್ತ ಬರುತ್ತಿರುವರು. ಈವರೆಗೂ ಭಾರ್ಗವರಾಮನ ಶೌರ್ಯ ಪರಾಕ್ರಮಗಳನ್ನು ಕೊಂಡಾಡು ತ್ತಿದ್ದ ಇವರು, ಈಗ, ದಶರಥರಾಮನನ್ನು ಕೊಂಡಾಡುತ್ತಿರುವ ರಲ್ಲವೆ? ಆಗಲಿ, ನಾನೂ ನೋಡುವೆನು. (ಮುಂದಕ್ಕಡಿಯಿಡು ವನು.)

ವಸಿಷ್ಠ :—(ಮುಂದಕ್ಕೆ ಬಂದು ಆದರದಿಂದ) ತಪೋಧನನಾದ ಭಾರ್ಗವರಾಮನೇ ! ತೇಜೋನಿಧಿಯಾದ ನಿನಗೆ ಸುಸ್ವಾಗತವು. ಅಪ್ರತಿಮ ಪ್ರಭಾವನಾದ ನಿನ್ನ ಆಗಮನದಿಂದ ಆನಂದಿತರಾದ ನಮ್ಮೆಲ್ಲರ ಆದರಾತಿಥ್ಯಗಳನ್ನು ಸ್ವೀಕರಿಸು.

ಭಾರ್ಗವ :—ಪೂಜ್ಯರೂ ತಪೋಗರಿಷ್ಠರೂ ಆದ ವಸಿಷ್ಠರ ಆದರಾತಿಥ್ಯದಿಂದ ಸಂತುಷ್ಟನಾದೆನು ! ದಶರಥಪುತ್ರನ ಸಂದರ್ಶ ನಾರ್ಥಿಯಾಗಿ ಬಂದಿರುವ ನನ್ನನ್ನು ಆತನೆಡೆಗೆ ಬೀಳ್ಕೊಡಬೇಕು. (ಮುಂದಾಗುವನು.)

ವಸಿಷ್ಠ :—(ನಸುನಕ್ಕು) ಎಲೈ ವಾಮದೇವನೇ ! ಸಿಂಹ ಶಾರ್ದೂಲಗಳು ಸಂಧಿಸಿದಂತೆ, ಮಹಾಪುರುಷರಾದ ಇವರಿಬ್ಬರೂ

ಸಂಧಿಸುವರು. ಅದ್ವಿತೀಯ ಪರಾಕ್ರಮಿಗಳಾಗಿರುವ ಇವರ ಸಮ್ಮಿಲನವು ಪ್ರೇಕ್ಷಣೀಯವಾಗಿರುವುದು. ನಾವೂ ಭೀತನಾಗಿರುವ ದಶರಥನ ಬಳಿಯಲ್ಲಿದ್ದು ನೋಡುವ. (ವಾಮದೇವನೊಡನೆ ಹೋಗುವನು.)

ಭಾರ್ಗವ :—(ಮುಂದೆ ಬಂದು) ರಾಮನೇ, ದಶರಥರಾಮನೇ!

॥ ತೆರೆಯಲ್ಲಿ ॥ (ದಶರಥನು ದೈನ್ಯದಿಂದ)

"ಪ್ರಸನ್ನನಾಗು, ಪ್ರಸನ್ನನಾಗು, ಪರಮ ತಪೋಧನನಾದ ಪರಶುರಾಮನೇ! ನನ್ನ ಪುತ್ರರಲ್ಲಿ ಪ್ರಸನ್ನನಾಗು. ಇವರಾರೂ ಯಾವ ಅಪರಾಧವನ್ನೂ ಮಾಡಿದವರಲ್ಲ; ಮೇಲಾಗಿ ಈಗಳೇ ವಿವಾಹಿತರಾಗಿ ಪತ್ನೀಸಮೇತ ಉತ್ಸವದಿಂದ ಬರುತ್ತಿರುವರು. ಇಂತಹ ಸುಕುಮಾರರಲ್ಲಿ ರೋಷಹೊಂದದೆ ಅನುಗ್ರಹಿಸು.

ಭಾ. ರಾ :—(ಪರಿಹಾಸದಿಂದ) ಈ ದಶರಥರಾಯನು ನನ್ನನ್ನು ನೋಡಿ ಕದಲಲಿಕ್ಕೂ ಅರಿಯದೆ ರಥದಲ್ಲಿ ಕುಳಿತಂತೆಯೇ ಕೈಜೋಡಿಸಿ ಮೊರೆಯಿಡುತ್ತಿರುವನು. ಇವನ ದೈನ್ಯವನ್ನು ನೋಡಿ ನನಗೆ ನಗೆ ಬರುತ್ತಿರುವುದು. (ಮತ್ತೆ ತೆರೆಯಕಡೆ ನೋಡುತ್ತ) ರಘುವೀರನಾದ ರಾಮಚಂದ್ರನೇ! ಇತ್ತ ಬಾರಯ್ಯ! ಎಷ್ಟು ನಾವಕಾಶ?

॥ ತೆರೆಯಲ್ಲಿ ॥ "ಪ್ರಿಯ ಸೋದರರಾದ ಭರತ ಶತ್ರುಘ್ನರೇ, ನೀವೀರ್ವರೂ ಭೀತರಾಗಿರುವ ಸೈನಿಕರನ್ನೂ ಸ್ತ್ರೀಯರನ್ನೂ ನೋಡಿಕೊಂಡಿರಬೇಕು. ಅನುಜಾತ, ಲಕ್ಷ್ಮಣಾ! ಮೂರ್ಛಿತನಾಗಿರುವ ಪಿತನನ್ನು ಉಪಚರಿಸಿ ಎಚ್ಚರಿಸು. ಪೂಜ್ಯರಾದ ವಸಿಷ್ಠ, ವಾಮದೇವಾದಿ ಗುರುಜನರೇ, ಅನುಗ್ರಹಿಸಬೇಕು.

ಭಾ. ರಾ :—ಭಾಪು, ಭಾಪು! ರಾಮನ ಪಿತರಣ ಗುಣವು ಸ್ತುತ್ಯವಾದುದು. (ತೆರೆಯಕಡೆ ನೋಡುತ್ತ) ಆಹಾ, ಗಂಭೀರ ಗಮನನಾಗಿ ಬರುತ್ತಿರುವ ಈ ಲೋಕಮೋಹನಾಕೃತಿಯನ್ನು

ನೋಡಲು ಎಷ್ಟು ಉತ್ಸಾಹವುಂಟಾಗಿರುವುದು! (ಅ. ೧೨.) ಮೇಲೆ ನೋಡಿ, ಓ, ಸವಿಸ್ಮಾರ್ವರ ಸಮ್ಮೇಲನವನ್ನು ನೋಡಲು ಈ ವೈಮಾನಿಕ ಸಂದೋಹವು ಎಷ್ಟು ಅಹಮಹಮಿಕೆಯಿಂದ ತಿರುಗುತ್ತಿರುವುದು. (ತೆರೆಯುಕಡೆ ನೋಡುತ್ತ) ರಾಮಾ, ದಶರಥರಾಮಾ!

ಶ್ರೀರಾಮ:—(ಮುಂದೆ ಬಂದು) ಮಹಾತ್ಮನಾದ ಭಾರ್ಗವನೇ! ಬ್ರಾಹ್ಮಣೋತ್ತಮನೂ, ಮಹಾತಪಸ್ವಿಯೂ, ತೇಜೋನಿಧಿಯೂ ಆಗಿರುವ ನಿನ್ನ ಪ್ರಭಾವವೆಲ್ಲವನ್ನೂ ನಾನು ಕೇಳಬಲ್ಲೆನು. ನಿನಗೆ ಸುಖಾಗಮನವೇ?

ಭಾರ್ಗವ:—ರಾಮಾ, ನೀನು ಅದ್ಭುತವಾದ ರುದ್ರ ಧನುಸ್ಸನ್ನು ಮುರಿದ ವೃತ್ತಾಂತವನ್ನು ನಾನು ದೇವತೆಗಳ ಮುಖದಿಂದ ಕೇಳಿ, ನಿನ್ನ ಬಳಿಗೆ ಬಂದೆನು. ಬಾಲನಾದ ನೀನು ಅದನ್ನು ಮುರಿದಹೆಯೆಂದು ನಾನು ಅರಿತಿರಲಿಲ್ಲ?

ಶ್ರೀರಾಮ:—(ಮಂದಸ್ಮಿತನಾಗಿ) ಈಗ ಅರಿವಾಯಿತಷ್ಟೆ! ಮತ್ತೇನು?

ಭಾರ್ಗವ:—ನಿನ್ನ ಬಾಹುಬಲವನ್ನಿಷ್ಟು ಪರೀಕ್ಷಿಸಬೇಕೆಂದಿರುವೆನು.

ಶ್ರೀರಾಮ:—ಹೇಗೆ?

ಭಾರ್ಗವ:—ಮೊದಲು, ನನ್ನ ಕೈಯಲ್ಲಿರುವ ಈ ಧನುಸ್ಸನ್ನು ತೆಗೆದುಕೊಂಡು ಹೆದೆಯೇರಿಸಿ, ಬಾಣಗಳನ್ನು ಹೂಡಬೇಕು; ಆ ಬಳಿಕ ನಿನ್ನೊಡನೆ ನಾನು ದ್ವಂದ್ವಯುದ್ಧಮಾಡಬೇಕೆಂದೂ ಆಲೋಚಿಸುತ್ತೇನೆ.

ಶ್ರೀರಾಮ:—ಆಗಲಿ, ಧನುರ್ಬಾಣಗಳನ್ನಿಲ್ಲಿ ತಾ, ಒಮ್ಮೆ, ನೋಡುವೆನು. (ಕೈನೀಡುವನು.)

ಭಾರ್ಗವ:—ನಿಧಾನಿಸು, ಈ ಧನುಸ್ಸಿನ ಇತಿಹಾಸವನ್ನು ಹೇಳುವೆನು.

ವಿಶ್ವಕರ್ಮ ನಿರ್ಮಿತಗಳಾಗಿ ಲೋಕಪ್ರಸಿದ್ಧವಾಗಿರುವ ಎರಡು ಮಹಾಧನುಸ್ಸುಗಳಲ್ಲಿ, ಒಂದು ದೈತ್ಯ ಸಂಹಾರ ಕಾಲದಲ್ಲಿ ವಿಷ್ಣು ವಿಗೂ ಮತ್ತೊಂದು ತ್ರಿಪುರಸಂಹಾರ ಕಾಲದಲ್ಲಿ ವಿಶ್ವಕರ್ಮನಿಂದ ರುದ್ರನಿಗೂ ಕೊಡಲ್ಪಟ್ಟುವು. ವಿಷ್ಣು ರುದ್ರರ ಕೈಗಳನ್ನು ಸೇರಿದ ಬಳಿಕ ಈ ಧನುಸ್ಸುಗಳೂ ಅವರ ಅಂಕಿತದಿಂದಲೇ ಪ್ರಸಿದ್ಧಹೊಂದಿ ದುವು. ಕಡೆಗೆ ನಿಮಿವಂಶದ ರಾಜನಾದ ದೇವರಾತನು ರುದ್ರನನ್ನು ಮೆಚ್ಚಿಸಿ ಶಿವಚಾಪವನ್ನು ಪಡೆದನು. ಅಂದಿನಿಂದ ಅದು ಅವರ ವಂಶಪಾರಂಪರ್ಯವಾಗಿ ಅವರಿಂದ ಪೂಜಿಸಲ್ಪಡುತ್ತಿದ್ದಿತು. ಈ ವಿಷ್ಣು ಧನುಸ್ಸು, ಶ್ರೀ ಮಹಾವಿಷ್ಣುವನ್ನು ಮೆಚ್ಚಿಸಿ, ನಮ್ಮ ಪಿತಾಮಹ ನಾದ ಋಚೀಕನು ಪಡೆದನು. ಋಚೀಕನಿಂದ ನಮ್ಮ ಪಿತನಿಗೆ ಬಂದಿತು. ಆತನಿಂದ ನನಗೆ ಲಬ್ಧವಾಯಿತು.

ರಾಮಚಂದ್ರಾ, ಮುಂದೆ ಕೇಳು, ಬಾಹುಬಲಗರ್ವಿತನಾದ ಕಾರ್ತ್ಯವೀರ್ಯನು ನಾನಿಲ್ಲದಿದ್ದಾಗ ನನ್ನ ಜನಕನನ್ನು ಕೊಂದನೆಂದು ತಿಳಿದು, ಕ್ಷತ್ರಿಯ ವಂಶವನ್ನೇ ನಿರ್ಮೂಲನಮಾಡುವೆನೆಂದು ಪ್ರತಿಜ್ಞೆ ಮಾಡಿ, ಇಪ್ಪತ್ತೊಂದು ಬಾರಿ ತಿರುಗಿ ಕ್ಷತ್ರಿಯರನ್ನೆಲ್ಲಾ ನಾಶ ಮಾಡುತ್ತ ಬಂದೆನು. ಆಗ ನನಗೆ ಈ ಧನುಸ್ಸೂ ಈ ಪರಶುವೂ ಸಹಾಯವಾಗಿದ್ದುವು. ಈ ಧನುಸ್ಸು ಸಾಮಾನ್ಯವಾದುದೆಂದೂ, ನೀನು ಮುರಿದುಹಾಕಿದ ಶೈವಧನುಸ್ಸು 'ಲೊಡ್ಡಾ'ಗಿರುವಂತೆ ಇದೂ 'ಲೊಡ್ಡಾ'ಗಿರುವದೆಂದೆಣಿಸಬೇಡ. ಜಾಗರೂಕನಾಗಿ ಇದನ್ನು ತೆಗೆದುನೋಡು. ಶೂರನೂ ನಿಜವಾದ ಕ್ಷತ್ರಿಯನೂ ನೀನಾ ಗಿದ್ದರೆ, ಇದನ್ನು ಬಾಗಿಸಿ, ಶರಸಂಧಾನಮಾಡುವೆ! (ಧನುರ್ಬಾಣ ಗಳನ್ನು ಕೊಡುವನು.)

ಶ್ರೀರಾಮ :—(ದರ್ಪದಿಂದ ನಕ್ಕು) ಎಲೈ ಭಾರ್ಗವನೇ! ಪಿತೃಘಾತಕನಾದ ಕಾರ್ತ್ಯವೀರ್ಯನಲ್ಲಿ ಕುಪಿತನಾದುದೂ, ಪಿತೃಶೋಕ ಸಂತಪ್ತನಾಗಿ ಪ್ರತೀಕಾರಕ್ರಿಯೆಯನ್ನು ಕೈಕೊಂಡುದೂ ನಿನ್ನ ಪುತ್ರ ಕರ್ತವ್ಯಕ್ಕೆ ಒಳಪಟ್ಟಿರಬಹುದು! ಆದರೆ, ಕ್ಷತ್ರಿಯ ಧರ್ಮ

ವನ್ನಾಗಲೀ, ಕ್ಷಾತ್ರಬಲವನ್ನಾಗಲೀ ತುಚ್ಛವಾಗಿ ಭಾವಿಸುವುದು ನಿನಗೆ ಧರ್ಮವಲ್ಲ!

(ಧನುಸ್ಸನ್ನು ತೆಗೆದುಕೊಳ್ಳುವನು.)

ಭಾರ್ಗವ:—॥ಸ್ವಗತಂ॥ ಏನಿದು! ಈ ರಾಮನು ಧನುಸ್ಸನ್ನು ನನ್ನ ಕೈಯಿಂದ ತೆಗೆದುಕೊಳ್ಳುತ್ತಿರುವಾಗಲೇ ನನ್ನ ಶರೀರವು ಜಡವಾಗಿಯೂ, ಆತ್ಮವು ಪರವಶವಾಗಿಯೂ ಕಾಣುವುವು! ಇವನ ಹಸ್ತಸ್ಪರ್ಶ ಮಾತ್ರದಿಂದ ನನ್ನಲ್ಲಿದ್ದ ದಿವ್ಯ ಶಕ್ತಿ ಇವನಲ್ಲಿ ಐಕ್ಯವಾದಂತೆ ಹೊಳೆವುದಕ್ಕೆ ಕಾರಣವೇನು!

ಶ್ರೀರಾಮ:—(ಧನುಸ್ಸನ್ನು ಸಾವಧಾನದಿಂದ ನೋಡಿ ಲೀಲೆಯಿಂದ ಬಾಗಿಸಿ ಹೆದೆಯೇರಿಸುವನು.)

ಭಾರ್ಗವ:—(ರಾಮನನ್ನೇ ನೋಡುತ್ತ ವಿಚಾರಪೂರ್ವಕ ದೃಷ್ಟಿಯಿಂದ)

ಆಹಾ! ಮಹಾನುಭಾವನಾದ ಶ್ರೀರಾಮನ ದಿವ್ಯ ತೇಜಸ್ಸನ್ನು ನೋಡಲು ಸಾಮಾನ್ಯರಿಂದಳವಲ್ಲ. ಅಪ್ರಾಕೃತನೂ ಅನಾದಿಸಿದ್ಧನೂ ಆದ ಆ ವಿಷ್ಣುವೇ ಇಲ್ಲಿ ಸಾಕ್ಷಾತ್ಕರಿಸಿರುವುದರಿಂದ ಧನುಷ್ಪಾಣಿಯಾಗಿ ದೇದೀಪ್ಯಮಾನನಾಗಿರುವ ಈತನನ್ನು ನೋಡುವ ಭಾಗ್ಯವಿಲ್ಲದವರೆಲ್ಲರೂ ಮೋಹಿತರಾಗಿ ಬಿದ್ದಿರುವರು; ದಿವ್ಯದೃಷ್ಟಿಯುಳ್ಳವರು ಮಾತ್ರ ನೋಡಿ ಧನ್ಯರಾಗುವರು!

(ಮತ್ತೂ ಆತ್ಮವಿಚಾರ ಮಾಡುತ್ತ ನಿಲ್ಲುವನು.)

ಶ್ರೀರಾಮ:—(ಶರಸಂಧಾನಮಾಡಿ, ದರ್ಪದಿಂದ ಭಾರ್ಗವನನ್ನು ನೋಡುತ್ತ)

ಎಲೈ ಜಮದಗ್ನಿ ಪುತ್ರನೇ! ನಿನ್ನ ಅಭಿಮತದಂತೆಯೇ, ಇದೋ ಶರಸಂಧಾನಮಾಡಿರುವೆನು. ದುರಭಿಮಾನದಿಂದ ಅನುಚಿತ ವಾಕ್ಯಗಳನ್ನಾಡಿದ ನಿನಗೆ ಈಗಲಾದರೂ ಕ್ಷತ್ರಿಯನಾದ ನನ್ನ ಪೌರುಷವು ತಿಳಿದಿತೇ? ಇದನ್ನಿನ್ನು ಎಲ್ಲಿ ಪ್ರಯೋಗಮಾಡಲಿ, ಹೇಳು? ನನ್ನಿಂದ

ಹೂಡಲ್ಪಟ್ಟ ಈ ಬಾಣವು ವ್ಯರ್ಥವಾಗುವಂತಹುದಲ್ಲ. ವಿಷ್ಣುಶಕ್ತಿಯುಳ್ಳ ಈ ಬಾಣಕ್ಕೆ ಆಹಾರವನ್ನು ಕೊಡಲೇ ಬೇಕು! (ಭಾರ್ಗವನನ್ನು ಕುಡಿನೋಟದಿಂದ ನೋಡುತ್ತ)

ಎಲೈ ಭಾರ್ಗವನೇ! ಬ್ರಾಹ್ಮಣ ಧರ್ಮಕ್ಕೆ ವಿರೋಧವೂ, ಕ್ಷತ್ರಿಯರಿಗೆ ಉಚಿತವೂ ಆದ ಪರುಷವೃತ್ತಿಯನ್ನು ಹಿಡಿದುದರಿಂದ ನೀನು ಶಿಕ್ಷಾರ್ಹನು! ಆದರೂ, ಬ್ರಾಹ್ಮಣ ಕುಲೋತ್ಪನ್ನನೂ ತಪಸ್ವಿಯೂ ಆಗಿರುವುದರಿಂದ ಕ್ಷಮಿಸಬೇಕಾಗಿದೆ! ಅಷ್ಟೇ ಅಲ್ಲ, ನಮ್ಮ ಅಸ್ತ್ರಾಚಾರ್ಯರಾದ ವಿಶ್ವಾಮಿತ್ರರ ಸೋದರಿಗೆ ಪೌತ್ರನಾಗಿರುವುದರಿಂದ ನೀನು ನನಗೆ ಮಾನನೀಯನೂ ಆಗಿರುವೆ!

ಭಾರ್ಗವ:—(ಹರ್ಷಬಾಷ್ಪಪರಿಪೂರ್ಣ ಲೋಚನನಾಗಿ ಜೋಡಿಸಿ ಗದ್ಗದ ಸ್ವರದಿಂದ)

*ಹೇ ಪರಂತಪ, ಪರಮ ಪಾವನರೂಪ, ಪಾದಾಪಹೃತ ಶಾಪ, ಖಂಡಿತಪಶುಪತಿಚಾಪ, ಕರಧೃತ ವಿಷ್ಣುಚಾಪ, ಖಂಡಿತ ತಾಪ, ಅಮಿತ ಪ್ರತಾಪ, ಸತ್ವಮಯ ಸ್ವರೂಪ, ಸಾಕೇತಾಧಿಪ! ಜಯಿಸು! ಜಯಿಸು!!

---

*(ರಾಗ : ಸಾಕೇಶೀ ದರು)

ಸಾಕೇತಾಧಿಪ, ಶ್ರೀಕರರೂಪ, ಜಿತಕೋಪ, ಸತ್ವಸ್ವರೂಪ || ಸಾಕೇತಾಧಿಪ ||ಪ||

ಕರಧೃತಚಾಪ, ಖಂಡಿತತಾಪ, ಕವಿಜನಾಲಾಪ, ಪಾಹಿ, ಪರಂತಪ||ಸಾಕೇತಾಧಿಪ|| ||೧||

ಅರಿಜನ ಭೀಕರ, ಕರಿವರ ಶ್ರೀವರ ; ವರದಾಭಯಕರ, ಪರಮ ಕೃಪಾಕರ ||ಸಾ|| ||೨||

ಇನಕುಲ ಮಂಡನ, ವನರುಹಲೋಚನ ; ಭವಬಂಧಮೋಚನ, ಭಕ್ತಾರ್ತಿಭಂಜನ ||ಸಾ|| ||೩||

ಕ್ಷಿತಿನಾಥ ರಾಘವ, ಸತತ ಸುವೈಭವ, ನುತಶೇಷಗಿರೀಧವ, ವಿಜಿತ ಮನೋಭವ ||ಸಾ|| ||೪||

ಹೇ ದಶರಥನಂದನ, ಕೌಸಲ್ಯಾನಂದ ವಿವರ್ಧನ, ಮುನಿ ಮನೋರಂಜನ, ಮದೀಯ ಗರ್ವಭಂಜನ, ಲೋಕಮೋಹನ, ನಿತ್ಯ ನಿರಂಜನ! ನಿನ್ನ ಪರಮಾನುಗ್ರಹದಿಂದ, ನಿನ್ನ ಅಮೋಘವಾದ ಸಂಸ್ಪರ್ಶನದಿಂದ ನಾನಿಂದು ಕೃತಾರ್ಥನಾದೆನು; ಪುನೀತನಾದೆನು; ಬಂಧಮುಕ್ತನಾದೆನು! (ಅನಿಮೇಷನಾಗಿ ಶ್ರೀರಾಮನನ್ನೇ ನೋಡುವನು.)

ಶ್ರೀರಾಮ:—(ನಸುನಕ್ಕು) ಎಲೈ ಭಾರ್ಗವನೇ, ಗರ್ವವನ್ನು ಳಿದು, ಆತ್ಮಸ್ವರೂಪವನ್ನು ತಿಳಿದು, ಪರಮಾತ್ಮ ತತ್ವವನ್ನರಿತು ಪ್ರಕಾಶಿಸುವ ನಿನ್ನನ್ನು ಅಭಿನಂದಿಸುವೆನು. ಆದರೆ, ನಾನು ಹೂಡಿ ರುವ ಈ ಬಾಣಕ್ಕೆ ಆಹಾರವನ್ನು ಕೊಡಲೇಬೇಕಷ್ಟೆ; ಏನೆನ್ನುವೆ?

ಭಾರ್ಗವ:—(ಸಮಾಧಾನದಿಂದ) ಭಗವಂತನಾದ ರಾಮ ಚಂದ್ರನೇ! ನಿನ್ನ ಅನುಗ್ರಹದಿಂದ ನಾನು ಧನ್ಯನಾದೆನು. ಆತ್ಮ ಜ್ಞಾನದಿಂದ ಮಾಯಾಪಾಶವನ್ನು ಹರಿದೊಗೆದುಬಿಡುವಂತೆ, ನಿನ್ನಿಂದ ಹೂಡಲ್ಪಟ್ಟ ಈ ಬಾಣವು, ನಾನು ಈವರೆಗೆ ತಪೋಬಲದಿಂದಾರ್ಜಿ ಸಿದ ಪುಣ್ಯಲೋಕಗಳ ಫಲವನ್ನು ಭುಂಜಿಸಲಿ! ಪರಮಪುರುಷ, ನಿನ್ನ ಪರತರಾನುಗ್ರಹದಿಂದ ನನ್ನ ಮನೋವೇಗ ಸಂಚಾರ ಶಕ್ತಿಯು ಮಾತ್ರ ಅಪ್ರತಿಹತವಾಗಿ ಉಳಿದಿರಲಿ! ಇಷ್ಟೇ ನನ್ನ ಪ್ರಾರ್ಥನೆ?

ಶ್ರೀರಾಮ:—ಸಮರ್ಪಕವಾದ ಅಭಿಮತವು! ಇದೋ ನಿನ್ನ ಅಭಿಮತದಂತೆಯೇ ಈ ಬಾಣವು ನಿನ್ನ ತಪಃಫಲವಾದ ಪುಣ್ಯಲೋಕಂ ಗಳ ಮಾರ್ಗವನ್ನು ತಪ್ಪಿಸಲಿ! (ಬಾಣವನ್ನು ಪ್ರಯೋಗಿಸುವನು.)

॥ ಗಗನದಲ್ಲಿ ॥ ದೇವದುಂದುಭಿಗಳೊಡನೆ ಪುಷ್ಪವೃಷ್ಟಿಯಾಗು ವುದು.

ಭಾರ್ಗವ:—(ಆನಂದಪರವಶನಾಗಿ ಕೈಜೋಡಿಸಿ)

ಪರಮಪುರುಷ! ವಿಜಯಿಯಾದ ನಿನಗೆ, ಈ ನಿನ್ನ ಲೀಲಾ ವಿಭೂತಿಗೆ, ಸದಾ ಸರ್ವದಾ ಭದ್ರಂ, ಶುಭಂ, ಮಂಗಳಂ!

(ತೆರೆಯ ಕಡೆ ನೋಡಿ)

ಪೂಜ್ಯರಾದ ವಸಿಷ್ಠ ವಾಮದೇವಾದಿ ಋಷಿವರರೇ ಬನ್ನಿರಿ! ಸುಕೃತಶಾಲಿಯಾದ ದಶರಥರಾಯನೇ! ಪ್ರಕೃತಿಸ್ಥನಾಗಿ, ವಿಜಯಿಯಾಗಿ, ಕಲಾಪರಿಪೂರ್ಣನಾಗಿ ಪ್ರಕಾಶಿಸುತ್ತಿರುವ ಪರಮಾತ್ಮನನ್ನು ನೋಡಿ ಧನ್ಯನಾಗು.

ಪುಣ್ಯಪುರುಷರಾದ ರಾಮಾನುಜರೇ, ನೀವೂ ಬನ್ನಿರಿ; ಬ್ರಹ್ಮಾದಿ ದೇವತೆಗಳಿಂದ ವಿನುತನಾದ ಪರಮಪುರುಷನ ಮಂಗಳಾಶಾಸನ ಮಾಡುವ—ಬನ್ನಿರಿ.

ತೆರೆಯಲ್ಲಿ ದಶರಥ :—ರಾಮಾ, ರಾಮಾ!

ಶ್ರೀರಾಮ :—(ತೆರೆಯ ಕಡೆ ನೋಡುತ್ತ ವಿನಯದಿಂದ) ಆರ್ಯ, ಇಲ್ಲಿರುವೆನು. ಅನುಜಾತರೇ, ಜನಕನನ್ನು ಸಂತೈಸಿ ಕರೆದುಕೊಂಡು ಬನ್ನಿರಿ. ಪೂಜ್ಯರೇ, ಭಾರ್ಗವರಾಮನು ತಮ್ಮನ್ನು ಇತ್ತ ಬರಲು ಕೋರುವನು.

(ಪುತ್ರರೊಡನೆ ದಶರಥನೂ, ವಸಿಷ್ಠ ವಾಮದೇವರೂ ಪ್ರವೇಶಿಸುವರು.)

॥ ಗಗನದಲ್ಲಿ ॥ ಧನ್ಯ, ದಶರಥರಾಯನೇ! ವಿಜಯಿಯಾದ ಶ್ರೀರಾಮಚಂದ್ರನನ್ನು ಪತ್ನೀ ಸಹಿತ ರಥಾರೋಹಣ ಮಾಡಿಸಿ, ಪುತ್ರ—ಪುತ್ರವಧೂ ಪರಿವಾರ ಸಹಿತ ಅಯೋಧ್ಯಾಭಿಮುಖನಾಗು. ಪ್ರಜೆಗಳೆಲ್ಲರೂ ಶ್ರೀರಾಮ ದರ್ಶನೋತ್ಸುಕರಾಗಿ ಇದಿರ್ಗೊಳ್ಳಲು ಬರುತ್ತಿರುವರು. ಸರ್ವಶಕ್ತನಾದ ಶ್ರೀರಾಮನೇ! ಸೀತಾಸಮೇತನಾಗಿ ರಥಾರೋಹಣಮಾಡು.

ವಸಿಷ್ಠ :—ಲೋಕಾಭಿರಾಮನಾದ ರಾಮಚಂದ್ರ! ಅಶರೀರ ವಾಣಿಯು ಮಾತಿನಂತೆ ನಡೆಯಿಸು.

ದಶರಥ :—ಸುಕುಮಾರ, ದೇವತೆಗಳೂ ಋಷಿಗಳೂ ಮಾಡಿರುವ ಅಪ್ಪಣೆಯನ್ನು ನೆರವೇರಿಸು.

ಶ್ರೀರಾಮ :—ಗುರುಜನ ಸಮೇತನಾದ ಜನಕನಿಗೂ ಗಗನ ಚಾರಿಗಳಾದ ದೇವತೆಗಳಿಗೂ ವಂದನೆ. (ಅನುಜಾತರೇ ಬನ್ನಿರಿ, ಪೂಜ್ಯರ ಅಪ್ಪಣೆಯಂತೆ ನಡೆಯಿಸುವ.)

(ಲಕ್ಷ್ಮಣ, ಭರತ, ಶತ್ರುಘ್ನರೊಡನೆ ಶ್ರೀರಾಮನು ಸೀತಾ, ಊರ್ಮಿಳಾ, ಮಾಂಡವೀ, ಶ್ರುತಕೀರ್ತಿಯರಿದ್ದ ಕಡೆಗೆ ಹೊರಟು ರಥಾರೂಢನಾಗುವನು.)

॥ ಗಗನದಲ್ಲಿ ॥

ಕಂದ ॥ ಜಯ ಜಯ, ಕೌಸಲ್ಯಾತ್ಮಜ ।
ಜಯ ಜಯ, ಭಕ್ತವಶ, ಸುರನತಾಂಘ್ರಿಸರೋಜಾ ॥
ಜಯ ಜಯ ರವಿಶತತೇಜಾ ।
ಜಯ ಜಯ ನಾಕಾಂತ ಕಾಮಿತಾಮರ ಭೂಜಾ ॥

(ದೇವದುಂದುಭಿಗಳೊಡನೆ ಪುನಃ ಪುಷ್ಪವೃಷ್ಟಿಯಾಗುವುದು.)

ಶ್ರೀರಾಮ :—(ಮಂದಸ್ಮಿತನಾಗಿ) ತಪೋಧನನಾದ ಭಾರ್ಗವ ರಾಮನೇ! ಮತ್ತೇನೆನ್ನುವೆ?

ಭಾರ್ಗವ :—(ಶ್ರೀರಾಮನ ಬಳಿಗೆ ಬಂದು ಆನಂದದಿಂದ) ಅನಾದಿಸಿದ್ಧನಾದ, ಆದ್ಯಂತ ರಹಿತನಾದ ರಾಮನಾಪ್ರಮೇಯನೇ! ಜೀವಪುರುಷನ ಅಹಂಕಾರವನ್ನು ಮುರಿದು, ಪರಮಾತ್ಮ ಸಂಬಂಧ ದಿಂದ, ಸಾರೂಪ್ಯವಾಂತು ಶೋಭಿಸುವಂತೆ ಮಾಯಾವರಣವನ್ನು ತೆಗೆದು, ನಿನ್ನ ಸಂಬಂಧದಿಂದ ನನ್ನನ್ನು ಉದ್ಧರಿಸಿದ ನಿನ್ನಲ್ಲಿ ನಾನೇ ನೆನ್ನಲಿ? ಜಗತ್ತೇ ನಿನ್ನದಾಗಿರುವುದು. ಜಡಚೇತನರಿಗೆ ಚೈತನ್ಯ ಪ್ರದನಾಗಿ, ದುರ್ಜನವಿದಾರನೂ, ಸಜ್ಜನಾಧಾರನೂ, ಶರಣಾಗತ ಪರಿಪಾಲನೂ ಆಗಿ ಹೀಗೆಯೇ ಅನವರತವೂ ವಿಜಯಶೀಲನಾಗಿ ಪ್ರಕಾಶಿಸುವಂತೆ ಆಶಂಸಿಸುವೆನು. ಮತ್ತು, ಮುನಿಮನೋಬ್ಜ ಭೃಂಗನೂ ಮಾನಿವಾಸನೂ ಆದ ರಾಮಸ್ವಾಮಿಯೇ, ನಿನಗೆ ಮನಸ್ತೃಪ್ತಿಯಾಗಿ ಮಂಗಳಾಶಾಸನವನ್ನು ಮಾಡಿ, ನಿನ್ನಿಂದ ಬೀಳ್ಕೊಳ್ಳಲೆಳಸುವೆನು?

ಶ್ರೀರಾಮ :—ನಿನ್ನ ಅಭಿಮತದಂತಾಗಲಿ!

ಭಾರ್ಗವ :—(ಉತ್ಸಾಹದಿಂದ) ಪೂಜ್ಯರಾದ ವಸಿಷ್ಠಾದಿ ತಪೋಧನರೂ, ಸುಕೃತಶಾಲಿಗಳಾದ ಭಕ್ತಜನರೂ—ಸಕಲರೂ ಶ್ರೀರಾಮನ ಮಂಗಳಾಶಾಸನವನ್ನು ಮಾಡಲು ಮುಂದಾಗಿ ಬಂದು ಸೇರಬೇಕೆಂದು ಕೋರುವೆನು.

(ಎಲ್ಲರೂ ಉಭಯ ಪಾರ್ಶ್ವಗಳಲ್ಲಿಯೂ ನಿಲ್ಲುವರು. ಭಾರ್ಗವ ರಾಮನೂ, ವಸಿಷ್ಠ ವಾಮದೇವಾದಿ ಋಷಿಗಳೂ ಮಂಗಳವನ್ನು ಹೇಳುವರು.)

(ರಾಗ :)

ಜಯ ಮಂಗಳಂ ಶ್ರೀ, ರಘುಕುಲಾಬ್ಧಿಚಂದ್ರಾ! ಭವತುತೇ ಶುಭ
ಮಂಗಳಂ ಶ್ರೀ ‖ ಪ ‖

ಕ್ಷೀರಶರಧಿ ಶಯನ। ಸುರರಿಪುಶಮನ। ಕರಿವರ ಗಮನ। ಮುರಹರ (ಶ್ರೀ)।
ಸುರವೈರಿ ಭಯಂಕರ ಮಾವರ ಶ್ರೀ ‖ ಸರಸಿಜಾಕ್ಷ, ಸಾಧುಪಕ್ಷ, ದುರುಳ ಶಿಕ್ಷ
ಶ್ರೀಕಟಾಕ್ಷ ‖ ಜಯ ಮಂಗಳಂ ಶ್ರೀ ರಘುಕುಲಾಬ್ಧಿಚಂದ್ರಾ ‖ ೧ ‖

ಭಾರ್ಗವ ಮದಹರಣಾ-ಭವನುತ ಚರಣ, ಭುವಿಜಾ ರಮಣ। ಭಯಹರ (ಭಾ)
ಪವನಾತ್ಮಜ ಸಂಸೇವಿತಪದ ಶ್ರೀ‖ ರವಿಕುಲಾನ್ವಯ ಲಲಾಮ, ಕವಿಜನಾಳಿ
ಪೂರ್ಣಕಾಮ ‖ ಜಯ ಮಂಗಳಂ ಶ್ರೀ ರಘುಕುಲಾಬ್ಧಿಚಂದ್ರಾ ‖ ೨ ‖

ದಾಸ ಹೃದಯಾವಾಸ, ದಶಶಿರಧ್ವಂಸ, ಶಶಿನಿಭಹಾಸ, ಶುಭಕರ
ಪಶುಪತಿಕಾರ್ಮುಕಭಂಜನ ಶ್ರೀ। ವಸುಮತೀಶ, ಕುಲವಿಭೂಷ ‖
ಶೇಷಶೈಲ ಶಿಖರವಾಸ ‖ ಜಯ ಮಂಗಳಂ ಶ್ರೀ ರಘುಕುಲಾಬ್ಧಿಚಂದ್ರಾ ‖ ೩ ‖

ಭದ್ರಂ! ಶುಭಂ!! ಮಂಗಳಂ!!!

ಸರ್ವೇಜನಾಃ ಸುಖಿನೋ ಭವಂತು, ಸಮಸ್ತ ಸನ್ಮಂಗಳಾನಿ ಸಂತು.

— ಸಮಾಪ್ತಂ —

(ಸೂತ್ರಧಾರನ ಪ್ರವೇಶ)

ಸೂತ್ರ:—ಮಹೋದಯರೇ !

ಅನನ್ಯ ಚಿಂತೆಯಿಂದ ಭಗವಂತನಾದ ರಾಘವನ ಬಾಲಲೀಲಾ ಪ್ರಸಂಗದಿಂದುಂಟಾಗುವ ಪರತರಾನಂದದಲ್ಲಿ ನೀವೆಲ್ಲರೂ ಏಕೀಭವಿಸಿ ಸಹಕರಿಸಿದುದಕ್ಕೆ ಕೃತಜ್ಞತಾಪೂರ್ವಕ ಧನ್ಯವಾದಗಳನ್ನರ್ಪಿಸಿರುವೆನು.

ಶ್ರೀರಾಮನು ಪರಮಾತ್ಮನು; ಭಾರ್ಗವನು ಪರಮಾತ್ಮನ ಅಂಶವನ್ನೊಳಕೊಂಡ ಶುದ್ಧ ಜೀವನು, ಮೋಹ ಮದ ಮಾತ್ಸರ್ಯಾದಿ ತಾಮಸಗುಣಗಳ ಸಂಬಂಧವನ್ನೂ ಬಿಡಿಸಿ, ಮನಸ್ಸು, ಬುದ್ಧಿ, ಇತರ ಇಂದ್ರಿಯಗಳನ್ನು ಜಯಿಸಿ ವಿಚಾರಮಾಡಿದಲ್ಲದೆ ಜೀವಾತ್ಮಸ್ವರೂಪವು ತಿಳಿಯಲಾರದು. ಜೀವಾತ್ಮಸ್ವರೂಪ ಜ್ಞಾನವಾದಲ್ಲದೆ ಪರಮಾತ್ಮ ಸಂಬಂಧ ಪರಿಜ್ಞಾನವಾಗಲೀ ಸಮಾಧಾನವಾಗಲೀ ಉಂಟಾಗಲಾರದು. ಜೀವಾತ್ಮ ಪರಮಾತ್ಮನ ಸಂಬಂಧ, ಸೂಕ್ಷ್ಮ ತತ್ವಗಳನ್ನು ಪಡೆಯಲು ಸಮರ್ಥನಾದ ಸದ್ಗುರುವಿನ ಸಹಾಯವು ಪ್ರಥಮ ಸಾಧನವು. ಗುರು ಕೃಪೆಯಿಂದ ಮೇಲೆ ಹೇಳಿದಂತೆ ಜೀತನನು ಮೇಲಕ್ಕೆದ್ದು ಪರಿಶುದ್ಧನಾಗಿ, ಆ ಬಳಿಕ ಪರಮಾತ್ಮನ ಪೂರ್ಣ ಕಟಾಕ್ಷಕ್ಕೆ ಪಾತ್ರನಾಗುವುದಕ್ಕಾಗಿ ಆತನ ದಯಾರಸವಾದ ಜಗನ್ಮಾತೆಯನ್ನು ಒಲಿಸಿಕೊಂಡು ಆ ಮೂಲಕ ಜೀವನಿಗೆ ಹತ್ತಿರುವ ದೋಷಗಳನ್ನು ಬಿಡಿಸಿ, ಸಾರೂಪ್ಯ ಸುಖವನ್ನು ಪಡೆಯಬೇಕು.

ಇಲ್ಲಿ ನೋಡಬೇಕಾದರೂ ಅಂತಹ ಸೂಕ್ಷ್ಮ ವಿಚಾರ ದೃಷ್ಟಿಯಿಂದಲೇ ನೋಡಿ, ಇದರ ಗುಣಗಳನ್ನು ಗ್ರಹಿಸಬೇಕೆಂದು ಪ್ರಾರ್ಥನೆ.

ಸಮಸ್ತ ಸನ್ಮಂಗಲಾನಿ ಸಂತು ||

|| ಶ್ರೀ ಕೃಷ್ಣಾರ್ಪಣಮಸ್ತು ||

# ದೇವರಾಜ ಬಹದ್ದೂರ್ ಧರ್ಮದ ನಿಧಿ

## ಸಾಹಿತ್ಯದ ಶಾಖೆ

---

1. ದೇವರಾಜ ಬಹದ್ದೂರ್ ಧರ್ಮದ ನಿಧಿಯ ಸಾಹಿತ್ಯ-ಶಾಖೆಯಿಂದ ಸಹಾಯವನ್ನು ಪಡೆಯುವುದಕ್ಕಾಗಿ ತಮ್ಮ ಮುದ್ರಿಸಿದ ಪುಸ್ತಕಗಳನ್ನೂ ಕೈಬರಹದ ಪುಸ್ತಕಗಳನ್ನೂ ಕಳುಹಿಸಲು ಅಪೇಕ್ಷೆಪಡುವ ಗ್ರಂಥಕರ್ತರು 1929ನೆಯ ಇಸವಿ ಜನವರಿ 15ನೆಯ ತಾರೀಖಿಗೆ ಮೊದಲು ಅರ್ಜಿಯನ್ನು ಬರೆದುಕೊಳ್ಳಬೇಕೆಂದು ಕೋರಿದೆ. ಗ್ರಂಥಕರ್ತರು ತಮ್ಮ ಗ್ರಂಥಗಳನ್ನು ಅರ್ಜಿಯೊಡನೆಯೇ ಕಳುಹಿಸಿ ಕೊಡಬೇಕು

2. ಸಹಾಯಪಡೆಯುವುದಕ್ಕಾಗಿ ಕಳುಹಿಸಿದ ಗ್ರಂಥಗಳು ಕನ್ನಡ ಅಥವಾ ಸಂಸ್ಕೃತ ಭಾಷೆಯಲ್ಲಿ ಬರೆದ ಸ್ವತಂತ್ರ ಗ್ರಂಥಗಳಾಗಲಿ, ಇತರ ಭಾಷೆಗಳಿಂದ ಕನ್ನಡಕ್ಕೆ ತರ್ಜುಮೆ ಮಾಡಿದವುಗಳಾಗಲಿ, ಟಿಪ್ಪಣಿ ವಿಮರ್ಶೆಗಳೊಡನೆ ಪ್ರಕಟಪಡಿಸಿದ ಪ್ರಸಿದ್ಧ ಕನ್ನಡ ಅಥವಾ ಸಂಸ್ಕೃತ ಗ್ರಂಥಗಳ ಮುದ್ರಣಗಳಾಗಲಿ ಇರಬಹುದು. ಬಹುಮಾನವನ್ನು ಕೊಡುವುದರಲ್ಲಿ ಮುಂದೆ ಹೇಳುವ ಕ್ರಮವನ್ನು ಅನುಸರಿಸಲಾಗುವುದು :—

(1) ಸ್ವತಂತ್ರ ಗ್ರಂಥಗಳು.

(2) ಭಾಷಾಂತರಗಳು.

(3) ಟಿಪ್ಪಣಿ ವಿಮರ್ಶೆಗಳೊಡನೆ ಪ್ರಕಟಪಡಿಸಿದ ಪ್ರಸಿದ್ಧ ಗ್ರಂಥಗಳು.

ಗ್ರಂಥಗಳು ಕೈಬರಹದ ಪ್ರತಿಗಳಾಗಲಿ, ಅಥವಾ ಮುದ್ರಿಸಿದವಾಗಲಿ ಇರಬಹುದು. ಮುದ್ರಿಸಿದ ಪುಸ್ತಕಗಳು 1928ನೆಯ ಜನವರಿ ಮೊದಲನೆಯ ತಾರೀಖಿಗೆ ಮೊದಲು ಮುದ್ರಣ ಮಾಡಿದುವಾಗಿರಕೂಡದು. ಕಳುಹಿಸಿರುವ ಗ್ರಂಥವು ಎಷ್ಟರ ಮಟ್ಟಿಗೆ ಸ್ವತಂತ್ರ ರಚನೆಯಾಗಿರುವುದೆಂಬುದನ್ನೂ, ಅಥವಾ ಭಾಷಾಂತರವಾಗಿದ್ದರೆ ಮೂಲಗ್ರಂಥವು ಯಾವುದೆಂಬುದನ್ನೂ ತಿಳಿಸಿ ಬಹುಮಾನಪಡೆಯುವುದಕ್ಕೆ ಯಾವ ವಿಶೇಷ ಸಂದರ್ಭದಿಂದ ಅರ್ಹತೆಯುಂಟೆಂಬುದನ್ನೂ ಸ್ಪಷ್ಟಪಡಿಸಿ ತೋರಿಸುವ ಟಿಪ್ಪಣಿಯೊಂದನ್ನು ಅರ್ಜಿಯೊಡನೆ ಕಳುಹಿಸಿಕೊಡಬೇಕು.

ಕೈಬರಹದ ಪ್ರತಿಗಳನ್ನು ಸ್ಪಷ್ಟವಾಗಿ ಕಾಗದದ ಒಂದೇ ಕಡೆ ಬರೆಯಬೇಕು.

3. ಈ ಸ್ಪರ್ಧೆಗೆ ಕನ್ನಡ ಗ್ರಂಥಗಳ ವಿಷಯದಲ್ಲಿ ಎಲ್ಲರಿಗೂ, ಸಂಸ್ಕೃತ ಗ್ರಂಥಗಳ ವಿಷಯದಲ್ಲಿ ಮೈಸೂರು ದೇಶದಲ್ಲಿಯ ಗ್ರಂಥಕರ್ತರು, ಅಥವಾ ಸಂಪಾದಕರಿಗೆ ಮಾತ್ರವೇ ಅವಕಾಶಕೊಡಲಾಗಿದೆ.

4. ವಿದ್ಯಾಭ್ಯಾಸದ ಡೈರೆಕ್ಟರವರು ನಿಯಮಿಸುವ ಒಂದು ಮಂಡಲಿಯ ತೀರ್ಮಾನದ ಮೇರೆ ಬಹುಮಾನಗಳನ್ನು ಕೊಡಲಾಗುವುದು.

5. ಬಹುಮಾನಗಳು ಎರಡಿರುವುವು ; ಮೊದಲನೆಯದು 500 ರೂಪಾಯಿ, ಎರಡನೆಯದು 200 ರೂಪಾಯಿ. ಇವುಗಳನ್ನು ಪರೀಕ್ಷೆಗೆ ನಿಂತಿರುವವರಲ್ಲಿ ಅತ್ಯುತ್ತಮರಾದ ಇಬ್ಬರಿಗೆ ಕೊಡಲಾಗುವುದು. ಯಾವ ವರ್ಷದಲ್ಲಿಯಾಗಲೀ ಬಹುಮಾನವನ್ನು ಪಡೆಯಲು ಯೋಗ್ಯವಾದ ಗ್ರಂಥಗಳು ಸ್ಪರ್ಧೆಗೆ ಬರದಿದ್ದರೆ ಬಹುಮಾನಗಳಲ್ಲಿ ಒಂದನ್ನೂ ಅಥವಾ ಎರಡನ್ನೂ ಕೊಡದೆ ಇರಲು ಡೈರೆಕ್ಟರವರಿಗೆ ಅಧಿಕಾರವಿರುತ್ತದೆ.

6. ಮುದ್ರಣ ಗ್ರಂಥವಾದರೆ ಬಹುಮಾನವನ್ನು ಯಾವ ನಿರ್ಬಂಧವೂ ಇಲ್ಲದಂತೆ ದ್ರವ್ಯರೂಪವಾಗಿ ಗ್ರಂಥಕರ್ತನಿಗೆ ಕೊಟ್ಟುಬಿಡಬಹುದು. ಕೈಬರಹದ ಪುಸ್ತಕವಾದರೆ ಒಂದು ವರ್ಷದೊಳಗಾಗಿ ಅದನ್ನು ಮುದ್ರಣ ಮಾಡಿಸುವಂತೆ ಭರವಸೆ ಕೊಟ್ಟಲ್ಲಿ, ಅಥವಾ ಆ ಪುಸ್ತಕದ ಮುದ್ರಣದ ಹಕ್ಕನ್ನು ಸರಕಾರಕ್ಕೆ ಒಪ್ಪಿಸಲು ಇಷ್ಟಪಟ್ಟಲ್ಲಿ, ಅದನ್ನು ಮುದ್ರಣಮಾಡಿಸುವುದಕ್ಕೆ ಧನಸಹಾಯ ಮಾಡಬಹುದು.

7. ಪ್ರತಿ ಸಂದರ್ಭದಲ್ಲಿಯೂ ವಿದ್ಯಾಭ್ಯಾಸದ ಡೈರೆಕ್ಟರವರ ತೀರ್ಮಾನವೇ ಆಖೈರಾಗಿರತಕ್ಕದ್ದು.

8. ಈ ಇಸ್ತಿಹಾರನ್ನನುಸರಿಸಿ ಬಹುಮಾನಕ್ಕಾಗಿ ಕಳುಹಿಸಿದ ಮುದ್ರಿತವಾದ ಪುಸ್ತಕಗಳ ಪ್ರತಿಗಳನ್ನು ಹಿಂದಕ್ಕೆ ಕೊಡುವುದಿಲ್ಲ. ಆದರೆ ಕೈಬರಹದ ಪ್ರತಿಗಳನ್ನು 1929ನೆಯ ಜೂನ್ ತಿಂಗಳಾದ ಮೇಲೆ ದರಖಾಸ್ತುದಾರರಿಗೆ ಹಿಂದಕ್ಕೆ ಕೊಡಲಾಗುವುದು.

**ಎನ್. ಎಸ್. ಸುಬ್ಬರಾವ್,**

ವಿದ್ಯಾಭ್ಯಾಸದ ಇಲಾಖಾ ಡೈರೆಕ್ಟರ್.

3368—28. ಬೆಂಗಳೂರು ಪ್ರೆಸ್